

# ಸಪ್ತಗಿರಿ

ಮೇ 85

ಬೆಲೆ: ಒಂದು ರೂಪಾಯಿ

JAGADISH

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಮಹದಾದಿದೇವ ನಮೋ ಮಹದಾದಿದೇವ ನಮೋ ॥ ಪ ॥

ಮಹಾಮಹಿಮನೆ ನಮೋ ಪ್ರಹ್ಲಾದ ವರದ ಅಹೋಬಿಲ ನಾರಸಿಂಹ ॥ ಅ. ಪ ॥

ಧರಣಿಗುಬ್ಬಸವಾಗೆ ತಾರಾಪಥವು ನಡುಗೆ
ಸುರರು ಕಂಗೆಟ್ಟೋಡೆ ನಭವ ಬಿಟ್ಟು
ತರುಗಿರಿಗಳಲ್ಲಾಡೆ ಶರಧಿಗಳು ಕುದಿದುಕ್ಕೆ
ಉರಿಯನುಗುಳುತ ಉದ್ಭವಿಸದೆ ನರಸಿಂಹ ॥ ೧ ॥

ಸಿಡಿಲಂತೆ ಗರ್ಜಿಸುತ ಕುಡಿನಾಲಿಗೆಯ ಚಾಚಿ
ಅಡಿಗಡಿಗೆ ಲಂಘಿಸುತ ಕಡುಕೋಪದಿಂದ
ಮುಡಿವಿಡಿದು ರಕ್ಕಸನ ಕೆಡಹಿ ನಖದಿಂದೊತ್ತಿ
ಕಡುವುವರ ಬಗೆದೆ ಕಡುಗಲಿ ನರಸಿಂಹ ॥ ೨ ॥

ಸರಸಿಜೋದ್ಭವ ಹರಪುರಂದರಾದಿ ಸಮಸ್ತ
ಸುರರು ಅಂಬರದಿ ಪೂಮಳೆ ಕರೆಯೆ
ಸಿರಿಸಹಿತ ಗರ ಡಾದ್ರಿಯಲಿ ನಿಂತು ಭಕುತರನು
ಶರಣಿಸಿದೆ ಪುರಂದರ ವಿಠಲ ನರಸಿಂಹ ॥ ೩ ॥

—ಶ್ರೀ ಪುರಂದರ ದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ವಾರ್ಷಿಕ ಬ್ರಹ್ಮೋತ್ಸವಗಳು 1985

| | | |
|---|---|---|
| 25-5-85 | ಶನಿವಾರ | ಧ್ವಜಾರೋಹಣ |
| 29-5-85 | ಬುಧವಾರ | ಗರುಡವಾಹನ |
| 1-6-85 | ಶನಿವಾರ | ರಥೋತ್ಸವ |
| 2-6-85 | ಭಾನುವಾರ | ಚಕ್ರಸ್ನಾನ |

ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿನಿತ್ಯವೂ ವಿವಿಧ ಉತ್ಸವಗಳೊಡನೆ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ.

ಶ್ರೀ ಗೋವಿಂದರಾಜಸ್ವಾಮಿ ದೇವಾಲಯವು ತಿರುಪತಿಯ ಬಸ್‌ಸ್ಟ್ಯಾಂಡ್, ರೈಲ್ವೆ ನಿಲ್ದಾಣದ ಬಳಿ ಇರುವುದು

ತಿರುಮಲೆ ತಿರುಪತಿ ದೇವಸ್ಥಾನಗಳು.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು,

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( 2 ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-30, ಬೆಳಗ್ಗೆ 10-30, ಸಂಜೆ 4-30

ಬಸ್ ಪ್ರಯಾಣದ ದರ , ಒಂದು ಟಿಕೆಟ್ಟಿಗೆ 12 ರೂ ಮಾತ್ರ, ಕಿರಿಯರಿಗೆ ಅರ್ಧ ಟಿಕೆಟ್;
( ಇದರಲ್ಲ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ. )

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**




ಗೌರವ ಸಂಪಾದಕರು

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ

ಕೆ. ಸುಬ್ಬಾರಾವು, ಎಂ.ಎ ,

ಉಪಸಂಪಾದಕ

ಬಿ. ಎಸ್. ಶ್ರೀನಿವಾಸನ್ ಎಂ.ಎ ,

ಮುದ್ರಣ·

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ,
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೫] ಮೇ ೧೯೮೫ [ಸಂಚಿಕೆ ೧೨


# ವಿಷಯಸೂಚಿ


| | | |
|---|---|---|
| ಸಂಪಾದಕೀಯ | | .. 4 |
| ಮನುಸ್ಮೃತಿ | ಡಾ॥ ಎಸ್ ಅನಂತರಂಗಾಚಾರ್ | .... 5 |
| ಶ್ರೀ ನರಸಿಂಹ ಚರಿತಾಮೃತ | ಕವಿತಾಕೃಷ್ಣ | ... 8 |
| ಶ್ರೀ ಪರಾಶರಭಟ್ಟರ ಅಷ್ಟಶ್ಲೋಕಿ | ಬಿ ಎಸ್. ಮಣಿ | ... 9 |
| ಬಾಗಿಲು ತೆರೆದಿದೆ | ಡಿ. ಕೃಷ್ಣ ಅಯ್ಯಂಗಾರ್ | ... 13 |
| ಪಾಂಡ್ಯದೇಶದ ವಿಷ್ಣು ಕ್ಷೇತ್ರಗಳು | ರಘುಸುತ | 25 |
| ತಿರುಪತಿಯಲ್ಲಿ ವ್ಯಾಸರಾಯರು | ಡಾ॥ ಸರ್ವೋತ್ತಮನ್ | .. 29 |
| ಚಾತುರ್ಮಾಸ್ಯ ಪ್ರದಕ್ಷಿಣೆಯಲ್ಲಿ | ವಿದ್ವಾನ್ ಬ ನ. ಗುಂಡೂರಾವ್ | . 33 |
| **ಗೃಹಲಕ್ಷ್ಮಿ** | | |
| ವಿಜಯನಗರ ಹಾಗೂ ನಂತರದ ಕಾಲದ ಕನ್ನಡ ಕವಯಿತ್ರಿಯರು | ಕೆ. ರಮಾನಂದ | ... 17 |
| **ಕಿಶೋರಜಗತ್** | | |
| ಇಬ್ಬರು ಬಾಲಕರು | ಜಿ. ಶ್ರೀಧರ್ | ... 21 |
| **ಯುವವಾಣಿ** | | |
| ಸಂಪಾದನೆ | ಪ್ರೊ॥ ಡಿ. ಟಿ ರಂಗಸ್ವಾಮಿ | ... 23 |
| ವಾರ್ತಾಲಹರಿ | | . 38 |


ಮುಖ ಚಿತ್ರ ಆಂಜನೇಯ ಚಿತ್ರ. ಕೆ ಜಗದೀಶ್

ಹಿಂಬದಿಯಲ್ಲಿ ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವದ ಒಂದು ದೃಶ್ಯ.

ಒಳಗಡೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಟಿ ರಾಮಾರಾವ್ ಅವರು ಏಪ್ರಿಲ್ 6 ರಂದು ತಿರುಪತಿಯಲ್ಲಿ ಬೆಟ್ಟದ ಬಳಸು ರಸ್ತೆ, ತಿರುಮಲೆಯಲ್ಲಿ ರಕ್ತನಿಧಿ ಕೇಂದ್ರ, ಹೊಸ ಕಲ್ಯಾಣಕಟ್ಟೆ, ಕ್ಯೂ ಕಾಂಪ್ಲೆಕ್ಸ್, ಶ್ರೀ ವೆಂಕಟೇಶ್ವರ ನಿತ್ಯ ಅನ್ನ ದಾನ ಯೋಜನೆಗಳನ್ನು ಉದ್ಘಾಟಿಸಿ, ತಿರುಪತಿಯಲ್ಲಿ ವಿಕಲಾಂಗ ಆಸ್ಪತ್ರೆಯನ್ನು ಆರಂಭಿಸಿ ಬಹಿರಂಗಸಭೆಯಲ್ಲೂ ಭಾಗವಹಿಸಿದರು ಅಂದಿನ ದೃಶ್ಯಗಳು.

# ಸಂಪಾದಕೀಯ

ಉರ್ವಾರುಕಮಿವ ಬಂಧನಾತ್

ಮೃತ್ಯೋರ್ಮುಕ್ಷೀಯ ಮಾಮೃತಾತ್

"ತೊಟ್ಟು ಕಳಚಿದ ಸೌತೇಕಾಯಿಯಂತೆ ಮೃತ್ಯುಬಂಧನದಿಂದ ತಪ್ಪಿಸು ಅಮೃತಬಂಧನದಿಂದ ಮಾತ್ರ ಬೇಡ" ಪಾರಮಾರ್ಥಿಕ ಪರಮಾವಧಿಗಾಗಿ ಮಾಡುವ ಪ್ರಾರ್ಥನೆಯನ್ನು ಪರಮ ಲೌಕಿಕ ಜೀವನಾಭ್ಯುದಯಕ್ಕೆ ಹಾತೊರೆಯುತ್ತ ಜಪಿಸುತ್ತಿದ್ದಾನೆ ಮಾನವ. ನಿಜವೆಂದರೆ ಜೀವಿ ಹುಟ್ಟಿದಂದಿನಿಂದ ಈ ಹಾತೊರೆಯುವಿಕೆ ಇದೆಯೆಂದು ತೋರುತ್ತದೆ ಸಾಮಾನ್ಯ ಜೀವಿಗಳು ಸಾಧಾರಣ ವಸ್ತುಗಳಿಂದಲೇ ರಕ್ಷಣೆ ಪಡೆಯುತ್ತಿದ್ದರೆ ಎಲ್ಲಕ್ಕಿಂತ ಹೆಚ್ಚಿನ ಆಲೋಚನಾಪರನೂ, ಅಧ್ಯಾತ್ಮವಿದನೂ ಆದ ಮಾನವ ಅಧಿಷ್ಠಾನ ದೈವವನ್ನೇ ಮೆಚ್ಚಿಸಿ ಮೃತ್ಯುವನ್ನು ತಪ್ಪಿಸಿಕೊಳ್ಳಲು ಎಷ್ಟು ದಾರಿಗಳುಂಟೋ ಅಷ್ಟೂ ದಾರಿಗಳಲ್ಲಿ ವರಗಳನ್ನು ಪಡೆದ. ಹೀಗೆ ರಾಜಮಾರ್ಗ ಏರ್ಪಟ್ಟ ಮೇಲೆ ಪತ್ತೋಟ ಮೀರಿದ ವೇಗದಿಂದ ಸಾಗಿ ಕಲ್ಪನಾಲೋಕದಲ್ಲಿ ವಿಹರಿಸುತ್ತ, ಈ ಜಡೇಶ್ವರನು ತಾನೇ ಜಗದೀಶ್ವರ ಎಂದು ಸಾರಿ ಹೇಳತೊಡಗಿದ.

ಆದರೆ ಜೀವನದ ಬೊಂಬೆಯಾಟದಲ್ಲಿ ನರನಾಟಕ ಸೂತ್ರಧಾರಿ ಆದ ಆ ಲೀಲಾವತಾರಿಗೆ ಈ ಬೊಂಬೆಗಳ ಆಟ, ಮಾಟ, ಹೂಟ, ಅರಚಾಟ ಅರ್ಭಟಗಳನ್ನು ನೋಡುವುದೂ ಒಂದು ಲೀಲೆ. ಎಂತಲೇ 'ಅವನೆಲ್ಲಿ' ಎಂದು ಕೂಗಾಡುವವ ಗಂಟಲು ನೋಯುವವರೆಗೆ ಕೂಗಲಿ ಎಂದು ಕಣ್ಣಾಮುಚ್ಚಾಲೆಯಾಡುತ್ತಿರುತ್ತಲೇ ಇನ್ನೊಂದೆಡೆ ತನ್ನ ವಿಶ್ವವ್ಯಾಪಕತೆಯನ್ನೂ ಸರ್ವಶಕ್ತತೆಯನ್ನೂ ಭಂಗ್ಯಂತರದಲ್ಲಿ ತೋರಿಸುತ್ತಿರುತ್ತಾನೆ. ಆದರೆ ಅರಚಾಟದಲ್ಲಿ ಮನುಷ್ಯ ಹದ್ದು ಮೀರಿದಾಗ, ವಿಶ್ವಧರ್ಮದಲ್ಲ ವಿಲಯ ತಾಂಡವವುಂಟಾದಾಗ 'ಧಾರುಣಿಯ ಹೊರೆಯಿಳಿಸಲೋಸುಗ' ತೆರೆ ಮರೆಯಿಂದ ತಾನೇ ಒಂದು ಪಾತ್ರವಾಗಿ, ರಂಗಪ್ರವೇಶಮಾಡಿ, ಈ ಭೀಭತ್ಸಕ್ಕೆ, ಭರತವಾಕ್ಯ ಹೇಳುತ್ತಾನೆ. ನವಜೀವನ ನಾಟಕಕ್ಕೆ ನಾಂದಿ ಹೇಳುತ್ತಾನೆ.

ಒಂದು ರೀತಿಯಲ್ಲಿ ನರಸಿಂಹಾವತಾರದ ಕಥೆ ನರರಿಗೆ ಹೇಳುವ ಕಥೆಯ ತಾತ್ಪರ್ಯವಿಷ್ಟೆ.

ನೀರಮೇಲಣ ಗುಳ್ಳೆಯಂತೆ ನಿಜದ ಸಂಸಾರವೆಂಬ ತತ್ತ್ವವನ್ನು ಎಲ್ಲರಿಗೂ ಮೊದಲಿಗೆ ಹೇಳಿದ ಹಿರಣ್ಯಕಶಿಪು ಯಾವ ಯಾವ ಮಾರ್ಗದಲ್ಲಿ ಮೃತ್ಯು ಬರಬಹುದೋ ಆ ಎಲ್ಲ ದಾರಿಗಳಲ್ಲೂ ಸಾವು ಬರದಂತೆ ವರಗಳನ್ನು ಹೊಂದಿ, ಕಂಚುಕೋಟೆಯನ್ನು ಕಟ್ಟಿಕೊಂಡೆನೆಂದು ಭಾವಿಸಿ, ತಾನೇ ದೈವವೆಂಬಂತೆ ಅಹಂಕಾರ ಹೊಂದಿ ಹರಿದ್ವೇಷಿಯಾದ. ಆದರೆ ಕ್ಷಣದಲ್ಲಿ ಲೋಕಗಳನ್ನೆಲ್ಲ ಗೆದ್ದ ಅವನಿಗೆ ಮನೆಯಲ್ಲೆ–ಮನದಲ್ಲೇ ಆರುಜನ ಶತ್ರುಗಳಿರುವರೆಂದೂ ಅವರನ್ನು ಗೆದ್ದರೆ ಅಸಾಧ್ಯವೆಂಬುದು ಇರದೆಂದೂ ಮನಸ್ಸಾಕ್ಷಿಯಂತಹ ಮಗ ಪ್ರಹ್ಲಾದ ಹೇಳಿದರೂ ಕಿವುಡುಗೇಳ್ದು ಪ್ರಹ್ಲಾದನನ್ನು ಶಿಕ್ಷಿಸಲು ಹೊರಟ ಎಷ್ಟು ವಿಧದಲ್ಲಿ ಶಿಕ್ಷಿಸಿದರೂ ಪ್ರಹ್ಲಾದ ಮನಸ್ಸಾಕ್ಷಿಯಂತೆಯೇ ಮರಣವಿಲ್ಲದವನಾಗಿದ್ದ ಮಿತಿಮೀರಿದ ಅಹಂಕಾರದಲ್ಲಿ ಸತ್ಯಾನ್ವೇಷಣೆ ಮಾಡಿ ತನ್ನಂತಹವನಿಗೆ ಸತ್ಯ ಎಷ್ಟು ಭಯಂಕರವಾಗಿ, ಕ್ರೂರವಾಗಿ, ತನ್ನರಿವಿಗೆ ಅತೀತವಾಗಿರುವುದೋ ತಿಳಿದುಕೊಂಡ. ಎಂತಲೇ ನಾರಾಯಣನು ಹಿರಣ್ಯಕಶಿಪುವಿದ್ದ ರಕ್ಷಕ ವಲಯಕ್ಕೆ ಅತೀತನಾಗಿ ಆವಿರ್ಭವಿಸಿ ಆ ಜೀವನಕ್ಕೆ ಭರತವಾಕ್ಯ ಹೇಳಿದ. ಆದರೆ, ಅಲ್ಲೇ ಇದ್ದ ಪ್ರಹ್ಲಾದನಿಗೆ ತನ್ನ ಬಾಹ್ಯಭಯಂಕರ ನರಸಿಂಹ ರೂಪದ ಹಿಂದಿನ ದಿವ್ಯ ಕರುಣಾಮಯ ತತ್ತ್ವ ದರ್ಶನವಾಗುವಂತೆ ಮಾಡಿದ.

ಇನ್ನು ನಾವೋ ಅತಿಸಾಮಾನ್ಯ ಮನುಷ್ಯರು ಆ ತಂದೆಗಿದ್ದ ಔದ್ಧತ್ಯವಾಗಲೀ ಈ ಮಗನಿಗಿದ್ದ ತತ್ತ್ವದಾರ್ಶನಿಕತೆಯಾಗಲೀ ನಮ್ಮಲ್ಲಿಲ್ಲ ಬದುಕೆಂದರೆ ಭಯ ಸಾವೆಂದರೆ ಅಸಹ್ಯ ಪಡುವ ನಾವು ತೂಫಾನಿನ ತರಗೆಲೆಗಳು. ಪರ ಪಾಡಾಗದ, ಇಹ ಸಹ್ಯವಾಗಬೇಕಾದರೆ ಆಪದ್ರಕ್ಷಕನಾದ ಆತ ಇಳಿದು ಬರಬೇಕಷ್ಟೆ, ಎಂತಲೇ ಪ್ರಾರ್ಥಿಸುವ.

" ಲಕ್ಷ್ಮೀ ನೃಸಿಂಹ ಮಮದೇಹಿ ಕರಾವಲಂಬಮ್ "

# ಸ್ಮೃತಿ

ವೇದಕ್ಕೆ ಶಿಕ್ಷಾ,ವ್ಯಾಕರಣ,ಛಂದಸ್ಸು, ನಿರುಕ್ತ, ಜ್ಯೋತಿಷ್ಯ, ಕಲ್ಪ ಎಂಬ ಆರು ಅಂಗಗಳಿವೆ. ಇವುಗಳಲ್ಲಿ ಕಲ್ಪವು ಗೃಹ್ಯ, ಶ್ರೌತ ಮತ್ತು ಧರ್ಮ ಎಂಬ ಮೂರು ಭಾಗಗಳಲ್ಲಿರುತ್ತವೆ ಇವು ಪರಸ್ಪರ ಪೂರಕಗಳು ಗೃಹ್ಯವು ಮನುಷ್ಯನ ನಿತ್ಯ ಕರ್ಮಗಳ ವಿಧಿಯನ್ನು ನಿರೂಪಿಸುತ್ತದೆ. ಶ್ರೌತವು ಯಜ್ಞಯಾಗಾದಿಗಳ ವಿಧಿಗಳಿಗೆ ಸಂಬಂಧಪಟ್ಟವು. ಧರ್ಮವು ದೈನಂದಿನ ವ್ಯವಹಾರಗಳಿಗೆ ಸಂಬಂಧಪಟ್ಟವು. ಇವು ಐಹಿಕಾಮುಷ್ಮಿಕ ಸಾಧನೆಗಳಿಗೆ ಸಹಾಯಕವಾಗಿರುತ್ತವೆ. ಈ ಮೂರು ಶಾಖೆಗಳ ಸೂತ್ರಗಳು ಏಕ ಕರ್ತೃಗಳಾಗಿರುವುದುಂಟು, ಭಿನ್ನಕರ್ತೃಗಳಾಗಿರುವುದೂ ಉಂಟು. ಇವು ಮೂರು ಒಟ್ಟಿಗೆ ಸೇರಿ ಮನುಷ್ಯನ ಸರ್ವತೋಮುಖವಾದ ಐಹಿಕ ಆಮುಷ್ಮಿಕ ಸಾಧನೆಗೆ ಸಹಾಯವಾಗುತ್ತವೆ ಅವುಗಳಲ್ಲಿ ಧರ್ಮಸೂತ್ರವು ಏಕದೇಶವಾದರೂ ಅದು ಮಾನವನ ದೈನಂದಿನ ವ್ಯವಹಾರಗಳಿಗೆ ಅತ್ಯಾವಶ್ಯಕವಾಗಿರುವುದರಿಂದ ಅವುಗಳ ವಿಚಾರ ವಿಮರ್ಶೆ ಭಾರತದಲ್ಲಿ ಏಕರೀತಿಯಲ್ಲಿ ಬೆಳೆದು ಆ ಸಾಹಿತ್ಯದ ರಾಶಿ ಮಹದಾಕಾರವನ್ನು ತಾಳಿದೆ. ಅವೆಲ್ಲವನ್ನೂ ಕೂಲಂಕಷವಾಗಿ ವಿಮರ್ಶೆಮಾಡುವದು ಸಾಧ್ಯವೇ ಇಲ್ಲ. ಕೆಲವು ಪ್ರತ್ಯೇಕ ಗ್ರಂಥಗಳು ಸಾವಿರಾರು ಪುಟಗಳಷ್ಟು ವಿಸ್ತಾರವಾಗಿವೆ. ಅವುಗಳಲ್ಲಿ ಮುಖ್ಯವಾದ ಪ್ರತ್ಯೇಕ ವೈಶಿಷ್ಟ್ಯಗಳಿಂದ ಕೂಡಿದ ಕೆಲವನ್ನು ವಿಚಾರ ಮಾಡಿದರೂ ಆ ಸಾಹಿತ್ಯರಾಶಿಯ ಪೂರ್ಣ ಪರಿಚಯವಾದಂತಾಗುತ್ತದೆ.

'ಧರ್ಮ ವೆಂಬ ಶಬ್ದಕ್ಕೆ ಸರಿಯಾದ ಅರ್ಥವನ್ನು ಹೇಳುವದು ಕಷ್ಟ ಆ ಶಬ್ದವು ' ಋಗ್ವೇದ ' ' ಐತ್ತರಿಯ ಬ್ರಹ್ಮಣ ' ' ಛಾಂದೋಗ್ಯೋಪನಿಷತ್ತು ' ' ತೈತ್ತರೀಯೋಪನಿಷತ್ತು ' ' ಮಹಾಭಾರತ ' ಮೊದಲಾದುವುಗಳೆಲ್ಲೆಲ್ಲಾ ಪ್ರಯೋಗವಾಗಿದೆ. ಒಂದೊಂದಡೆಯಲ್ಲಿಯೂ ಭಿನ್ನ ಭಿನ್ನಾರ್ಥವಾಚಿಯಾಗಿದೆ. ಮೂಲಾರ್ಥದಲ್ಲಿ ಅದು ಪ್ರಪಂಚಕ್ಕೆ ಧಾರಕವಾದ ಶಕ್ತಿ ಎರಿದರ್ಥವಾಗುತ್ತದೆ ಮುಂದೆ ನ್ಯಾಯ, ನೀತಿ ಕರ್ತವ್ಯ, ನಡತೆ,ಮತ ಮೊದಲಾದ ಎಲ್ಲವೂ ಅದರ ವಿಸ್ತಾರ್ಥ ವ್ಯಾಪ್ತಿಯಲ್ಲಿ ಅಡಕವಾಗುತ್ತವೆ ಆದರೆ ಧರ್ಮಶಾಸ್ತ್ರಕಾರರು ಧರ್ಮವು ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ನೈಮಿತ್ತಿಕ ಧರ್ಮ, ಗುಣಧರ್ಮ ಎಂಬ ಐದು ಭಾಗಗಳಲ್ಲಿ ಕರ್ತವ್ಯವನ್ನು ನಿರೂಪಿಸತಕ್ಕದ್ದು ಎಂದು ಸಿದ್ಧಾಂತ ಮಾಡಿದ್ದಾರೆ.

ಧರ್ಮಕ್ಕೆ ವೇದ, ಸ್ಮೃತಿ ಮತ್ತು ಶಿಷ್ಟಾಚಾರ ಮೂಲವೆಂಬ ವಿಷಯವನ್ನು ಸಾಮಾನ್ಯವಾಗಿ ಎಲ್ಲಾ ಧರ್ಮಶಾಸ್ತ್ರಜ್ಞರೂ ತಮ್ಮವಿವಿಧ ರೀತಿಯ ಉಕ್ತಿಗಳಿಂದ ಅಂಗೀಕಾರ ಮಾಡಿದ್ದಾರೆ."ವೇದೋ ಧರ್ಮ ಮೂಲಂ ತದ್ವಿದಾಂ ಚ ಸ್ಮೃತಿಶೀಲೆ" (ಗೌತಮ ಧರ್ಮಸೂತ್ರ-೧೧೨) "ಧರ್ಮಜ್ಞ ಸಮಯಃ ಪ್ರಮಾಣಂ ವೇದಾಶ್ಚ (ಆಪಸ್ತಂಭ ಧರ್ಮ ಸೂತ್ರ-೧, ೧೧೨) "ಶ್ರುತಿಸ್ಮೃತಿ ವಿಹಿತೋ ಧರ್ಮಃ ತದಲಾಭೆ ಶಿಷ್ಟಾಚಾರಃ ಪ್ರಮಾಣಂ ಶಿಷ್ಟಃ ಪುನರಕಾಮಾತ್ಮಾ (ವಾಸಿಷ್ಠ ಧರ್ಮಸೂತ್ರ ೧, ೪೬) "ವೇದೋಽಖಿಲೋ ಧರ್ಮ ಮೂಲಂ ಸ್ಮೃತಿಶೀಲೇಚ ತದ್ವಿದಾಂ। ಆ ಚಾ ರ ಶ್ಚೈ ವ ಸಾಧೂನಾಂ ಆತ್ಮನ ಸ್ತುಷ್ಟಿರೇವ ಚ" (ಮನುಸ್ಮೃತಿ ೨-೬) ಶ್ರುತಿ ಸ್ಮೃತಿಃ ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ। ಸಮ್ಯಕ್ ಸಂಕಲ್ಪಜಃ ಧರ್ಮಮೂಲ ಮಿದಂಸ್ಮೃತಮ್॥ (ಯಾಜ್ಞವಲ್ಕ್ಯ ೧-೭) ಎಂಬ ವಾಕ್ಯಗಳು ಅದನ್ನು ಸ್ಪಷ್ಟಪಡಿಸುತ್ತವೆ. ಆದರೆ ವೇದಗಳು ಯಾವ ಒಂದು ಭಾಗದಲ್ಲಿಯೂ ಧರ್ಮಸ್ವರೂಪವನ್ನೂ ವಿವರವನ್ನೂ ಕ್ರೋಡೀಕರಿಸಿ ಹೇಳಿಲ್ಲ. ಬೇರೆಬೇರೆ ಸ್ಥಳಗಳಲ್ಲಿ ಧರ್ಮಕ್ಕೆ ಸಂಬಂಧಪಟ್ಟ, ಹಾಗೆ ಕೆಲವು ಉಕ್ತಿಗಳು ಸಿಕ್ಕುತ್ತವೆ ಅವುಗಳನ್ನೆಲ್ಲಾ ಸಂಗ್ರಹಿಸಿ ಸ್ಮೃತಿಕಾರರು ತಮ್ಮ ಪ್ರತ್ಯೇಕ ಸ್ಮೃತಿ ಗ್ರಂಥಗಳನ್ನು ನಿರ್ಮಿಸಿದ್ದಾರೆ. ಶಿಷ್ಟರಾದವರು ಅದನ್ನು ತಮ್ಮ ನಿತ್ಯ ವ್ಯವಹಾರಗಳಲ್ಲಿ ಆಚರಣೆಗೆ ತಂದು ಪ್ರಕಟಿಸಿದ್ದಾರೆ. ಇವುಗಳ ಆಧಾರದ ಮೇಲೆ ಧರ್ಮಸ್ವರೂಪವನ್ನು ನಿರ್ಣಯಿಸತಕ್ಕದ್ದಾಗಿದೆ

ಧರ್ಮಶಾಸ್ತ್ರ ಗ್ರಂಥರಚನೆಯ ಪ್ರಾರಂಭಕಾಲ ವಾವುದೆಂಬುದನ್ನು ಸ್ಪಷ್ಟವಾಗಿ ಹೇಳುವುದು ಸಾಧ್ಯವಿಲ್ಲ ಯಾಸ್ಕರ 'ನಿರುಕ್ತ' ದಲ್ಲಿ ದಾಯಭಾಗದ ವಿಷಯವು ಯಾದೃಚ್ಛಿಕವಾಗಿ ಸೂಚಿತವಾಗಿರುವುದಲ್ಲದೆ ಯಾವುದೋ ಧರ್ಮಶಾಸ್ತ್ರ ಗ್ರಂಥದಿಂದ ಒಂದು ಶ್ಲೋಕವು ಅನುವಾದವಾಗಿದೆ, ಆದುದರಿಂದ ಅದಕ್ಕೆ ಹಿಂದೆ ಈ ವಿಷಯವಾದ ಗ್ರಂಥರಚನೆ ಆಗಿದ್ದಿರಬೇಕು. ಗೌತಮ, ಬೋಧಾಯನ, ಆಪಸ್ತಂಭರು ಪ್ರಾಚೀನ ಋಷಿಗಳ ವಿಷಯವನ್ನು ಉಲ್ಲೇಖ ಮಾಡಿದ್ದಾರೆ ಕಾತ್ಯಾಯನ ಜೈಮಿನಿಗಳು ಅನೇಕ ಧರ್ಮ ಶಾಸ್ತ್ರಗಳ ವಿಷಯವಾಗಿ ಚರ್ಚೆ ಮಾಡಿದ್ದಾರೆ ಪತಂಜಲಿಯ 'ಮಹಾಭಾಷ್ಯ'ದಲ್ಲಿ ಧರ್ಮಸೂತ್ರ ಕಾರರ ಹೆಸರು ಉಕ್ತವಾಗಿದೆ. ಈ ಎಲ್ಲ ಕಾರಣಗಳಿಂದ ಭಾರತದಲ್ಲಿ ಧರ್ಮಸೂತ್ರ ಗ್ರಂಥಗಳು ಕ್ರಿ. ಪೂ ೬೦೦ ಕ್ಕಿಂತ ಹಿಂದೆಯೇ ಪ್ರಾರಂಭವಾಗಿದ್ದಿರಬೇಕು.

ಆದಿಕಾಲದಿಂದ ಇಲ್ಲಿಯವರೆಗಿನ ಧರ್ಮಶಾಸ್ತ್ರ ಸಾಹಿತ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಪ್ರಾಚೀನ ಧರ್ಮಸೂತ್ರಗಳಿಂದ 'ಮನುಸ್ಮೃತಿ' ವರೆಗಿನ ಕಾಲ ಮೊದಲನೆಯದು ಈ ಕಾಲದಲ್ಲಿ ಗೌತಮ, ಬೋಧಾಯನ, ಆಪಸ್ತಂಭ ಮೊದಲಾದವರು ಛಂದೋಬದ್ಧವಾದ ಸೂತ್ರಗಳನ್ನ ರಚಿಸಿದರು ಈ ಕಾಲವು ಕ್ರಿ. ಪೂ. ೬ನೆಯ ಶತಮಾನದಿಂದ ಕ್ರಿಸ್ತಶಕದ ಆದಿಯವರೆಗೆ ವ್ಯಾಪಿಸುತ್ತದೆ. ಎರಡನೆಯ ಕಾಲವು ಕ್ರಿಸ್ತಶಕದ ಆದಿಯಿಂದ ಎಂಟನೆಯ ಶತಮಾನದವರೆಗೆ. ಮನು, ಯಾಜ್ಞವಲ್ಕ್ಯ, ನಾರದ ಮೊದಲಾದವರು ತಮ್ಮ ಪದ್ಯಮಯವಾದ ಸ್ಮೃತಿಗಳನ್ನು ರಚಿಸಿದ ಕಾಲವಿದು. ಮೂರನೆಯ ಕಾಲವು ವ್ಯಾಖ್ಯಾನ ಮತ್ತು ನಿಬಂಧಗಳ ಕಾಲ. ಇದು ಕ್ರಿ ಶ. ೭ ನೆಯ ಶತಮಾನ ದಿಂದ ೧೮ ನೆಯ ಶತಮಾನದ ವರೆಗೆ ಪಸರಿಸಿದೆ. ಈ ಭಾಗದ ಆದಿಕಾಲವು ಪ್ರಖ್ಯಾತ ವ್ಯಾಖ್ಯಾನಕಾರರ ಸುವರ್ಣಯುಗ. ಸ್ಮೃತಿ, ವ್ಯಾಖ್ಯಾನ, ಟೀಕೆಗಳು ಕಳೆದ ಶತಮಾನದವರೆಗೆ ರಚಿತವಾಗುತ್ತಲೇ ಇತ್ತು. ಆದರೆ ೧೨ ನೆಯ ಶತಮಾನದಿಂದ ನಿರ್ದಿಷ್ಟ ಗ್ರಂಥಗಳಿಗೆ ಟೀಕೆಯನ್ನು ರಚಿಸುವ ಬದಲು ಎಲ್ಲ ಧರ್ಮಶಾಸ್ತ್ರ ಗ್ರಂಥಗಳ ಸಂಗ್ರಹ ರೂಪವಾದ ನಿಬಂಧಗ್ರಂಥಗಳನ್ನು ರಚಿಸುವ ಸಂಪ್ರದಾಯ ಪ್ರಾರಂಭವಾಯಿತು. 'ಕಲ್ಪತರು' 'ಸ್ಮೃತಿಚಂದ್ರಿಕೆ', ಚತುರ್ವರ್ಗಚಿಂತಾಮಣಿ', 'ಚ ಂ ಡೀ ಶ್ವ ರ ನ,

ಡಾ॥ ಎನ್. ಅನಂತರಂಗಾಚಾರ್

ಟೀಕಾಕರಗಳು ಉತ್ತಮ ನಿಬಂಧಗ್ರಂಥಗಳು. ಆದಿಕಾಲದಲ್ಲಿ ವ್ಯಾಖ್ಯಾನವನ್ನು ರಚಿಸುತ್ತೇನೆಂದು ಹೇಳಿದವರೂ ತಮ್ಮ ಗ್ರಂಥಗಳಲ್ಲಿ ನಿಬಂಧಗಳ ಮಾದರಿಯಲ್ಲಿಯೇ ತತ್ತ್ವಗಳನ್ನೆಲ್ಲಾ ಕ್ರೋಢೀಕರಿಸಿ ಪರಸ್ಪರ ವಿರೋಧವಾದ ಅಂಶಗಳನ್ನು ಯುಕ್ತಿಯುಕ್ತವಾಗಿ ಸಾಧಾರವಾಗಿ ಸ್ಮೃತಿ ಸಮನ್ವಯಮಾಡಲು ಪ್ರಯತ್ನ ಮಾಡಿದ್ದಾರೆ. ಆದುದರಿಂದ ನಿಜವಾಗಿ ನೋಡುವುದಾದರೆ ಟೀಕಾ ವ್ಯಾಖ್ಯಾನಗಳಲ್ಲಿ ನಿಬಂಧಗಳಿಗೂ ವಿಶೇಷ ವ್ಯತ್ಯಾಸವಿಲ್ಲ.

ಹಿಂದೆಯೇ ತಿಳಿಸಿರುವಂತೆ ಗೃಹ್ಯ-ಧರ್ಮಸೂತ್ರಗಳಿಗೆ ನಿಕಟಸಂಬಂಧವಿದೆ ಎರಡರ ವಿಷಯ ರಾಶಿಯು ಬಹುಮಟ್ಟಿಗೆ ಏಕರೂಪವಾಗಿರುವುದರಿಂದ ಅವುಗಳ ಪರಸ್ಪರ ಸ್ಪಷ್ಟ ವ್ಯತ್ಯಾಸಗಳನ್ನು ವಿಶದ ಪಡಿಸಲಾಗುವುದಿಲ್ಲ. ಅಲ್ಲದೆ ಕೆಲವು ಶಾಖೆಗಳಲ್ಲಿ ಗೃಹ್ಯಧರ್ಮ ಸೂತ್ರಗಳಲ್ಲಿ ಸಮಾನವಾದ ಸೂತ್ರಗಳ ಪ್ರಯೋಗವಿದೆ ಆದರೆ, ಗೃಹ್ಯ ಸೂತ್ರಗಳಲ್ಲಿ ದೈನಂದಿನ ಆಚಾರ ವ್ಯವಹಾರಗಳೂ ಧರ್ಮ ಸೂತ್ರಗಳಲ್ಲಿ ಸಾಮಾನ್ಯ ನಡೆನುಡಿಗಳ ವಿಚಾರಗಳೂ ಉಕ್ತವಾಗಿವೆ.

ಧರ್ಮಶಾಸ್ತ್ರಕ್ಕೆ ಸಂಬಂಧಪಟ್ಟ ಸೂತ್ರಗಳಲ್ಲಿ ಗೌತಮ, ಬೋಧಾಯನ, ಆಪಸ್ತಂಭ ಹಿರಣ್ಯಕೇಶಿ ವಿಷ್ಣು, ಹಾರೀತ, ಶಂಖಲಿಖಿತ ಧರ್ಮ ಸೂತ್ರಗಳು ಮುಖ್ಯವಾದವು ಇವುಗಳಲ್ಲಿ 'ಗೌತಮಧರ್ಮಸೂತ್ರ'ವೇ ಪ್ರಾಚೀನವಾದುದು.

ಸೂತ್ರಗಳಿಗೆ ಮುಂದಿನ ಕಾಲದಲ್ಲಿ ವ್ಯಾಖ್ಯಾನ ರೂಪವಾದ ಸ್ಮೃತಿಗಳೂ ರಚಿತವಾದವು. ಪ್ರಾಚೀನ ಕಾಲದಲ್ಲಿ ವಿಸ್ತಾರವಾದ ಅರ್ಥದಲ್ಲಿ ಸ್ಮೃತಿ ಎಂಬ ಶಬ್ದವು ವೈದಿಕೇತರ ಗ್ರಂಥಗಳಲ್ಲಿ ಶ್ರೌತ ಗೃಹ್ಯ ಸೂತ್ರಗಳಿಗೂ ಮನು, ಮಹಾಭಾರತ, ಯಾಜ್ಞವಲ್ಕ್ಯರಿಗೂ, ಅನ್ವಯವಾಗುತ್ತಿತ್ತು. ಕಾಲಕ್ರಮದಲ್ಲಿ ಅದರ ಸಂಕುಚಿತಾರ್ಥದಲ್ಲಿ ಅದು ಧರ್ಮಶಾಸ್ತ್ರಕ್ಕೆ ಪರ್ಯಾಯನಾಮವಾಗಿ ಉಪಯೋಗವಾಗತೊಡಗಿತು. ಅಲ್ಲದೆ ಆದಿಕಾಲದಲ್ಲಿ ಸ್ಮೃತಿಗಳು (ಧರ್ಮಶಾಸ್ತ್ರವಿಷಯಕವಾದ ಗ್ರಂಥಗಳು) ಬಹುಸ್ವಲ್ಪವಾಗಿದ್ದವು. ಗೌತಮರು ಮನು ಒಬ್ಬನನ್ನು ಮಾತ್ರ ಹೆಸರಿಸಿದ್ದಾರೆ ಬೋಧಾಯನ, ವಾಸಿಷ್ಠ, ಮನು, ಇನ್ನೂ ಇತರರನ್ನೂ ಸೂಚಿಸಿದ್ದಾರೆ. ಮುಂದೆ ಕಾಲಾನುಕಾಲದಲ್ಲಿ ಧರ್ಮಶಾಸ್ತ್ರ ಗ್ರಂಥಗಳ ಆದಿಯಲ್ಲಿ ಒಂದು ದೊಡ್ಡ ಪಟ್ಟಿಯನ್ನೇ ಕೊಡುವುದು ಪದ್ಧತಿಯಾಗಿ ಬೆಳೆದು ಬಂದಿತು.

ಮೇಲ್ಕಂಡ ಸ್ಮೃತಿಗಳು ಬಹುಭಿನ್ನ ಕಾಲದವು ಕೆಲವು ಪದ್ಯದಲ್ಲಿ ಮತ್ತು ಕೆಲವು ಗದ್ಯದಲ್ಲಿ ಹಲವು ಬಹುಭಾಗ–ಪದ್ಯದಲ್ಲಿಯೇ ರಚಿತವಾಗಿವೆ. ಅಲ್ಲದೆ ಭಿನ್ನ ಭಿನ್ನ ಕಾಲದವುಗಳೂ ಆಗಿವೆ.

ಈ ಸ್ಮೃತಿಗಳೆಲ್ಲ ಸಮಾನವಾದ ಪ್ರಮಾಣ ಗ್ರಂಥಗಳಾಗಿ ಎಲ್ಲರಿಂದಲೂ ಅಂಗೀಕೃತವಾಗಿಲ್ಲ. ಅನೇಕವು ಅಜ್ಞಾತವಾಗಿಯೇ ಉಳಿದಿವೆ. ಎಲ್ಲ ಗ್ರಂಥಗಳಲ್ಲಿಯೂ ಉದ್ಧೃತವಾಗಿಯೂ ಇಲ್ಲ ಧರ್ಮಸೂತ್ರಗಳನ್ನು ಬಿಟ್ಟರೆ ಕೇವಲ ಐದಾರು ಸ್ಮೃತಿಗಳಿಗೂ ಕೂಡ ವ್ಯಾಖ್ಯಾನಗಳಿಲ್ಲ ವ್ಯಾಖ್ಯಾನಗಳ ದೃಷ್ಟಿಯಿಂದಲೇ ಬೆಲೆ ಕಟ್ಟುವುದಾದರೆ 'ಮನುಸ್ಮೃತಿ'ಗೆ ಅಗ್ರಸ್ಥಾನ. 'ಯಾಜ್ಞವಲ್ಕ ಸ್ಮೃತಿಗೆ' ಎರಡನೆಯದು.

'ಮನುಸ್ಮೃತಿ'ಯ ಅನೇಕ ರೀತಿಯ ಸಂಸ್ಕರಣಗಳು ಕುಲ್ಲೂಕ, ಮೇಧಾತಿಥಿ, ಗೋವಿಂದರಾಜರ ವ್ಯಾಖ್ಯಾನಗಳೊಡನೆ ಪ್ರಕಾಶಿತವಾಗಿವೆ. ಬೇರೆ ಬೇರೆಯಾಗಿ ಪಾಶ್ಚಾತ್ಯ ಭಾಷೆಗಳಿಗೂ ಪರಿವರ್ತಿತವಾಗಿವೆ. ಋಗ್ವೇದ, ತೈತ್ತರೀಯ ಸಂಹಿತೆ, ಐತರೇಯಬ್ರಾಹ್ಮಣ, ಶತಪಥ ಬ್ರಾಹ್ಮಣ, ನಿರುಕ್ತ, ವಸಿಷ್ಠ, ಗೌತಮ ಧರ್ಮ ಸೂತ್ರ, ಮಹಾಭಾರತ, ನಾರದಸ್ಮೃತಿ, ಮೊದಲಾದುವುಗಳಲ್ಲಿ ಮನುವಿನ ವಿಷಯ ಉಕ್ತವಾಗಿದೆ.

'ಮನುಸ್ಮೃತಿಯ ಕರ್ತೃವಾರೆಂದು ತಿಳಿಯುವುದು ಕಷ್ಟ. ಋಗ್ವೇದದಲ್ಲಿ ಉಕ್ತವಾಗಿರುವ ಪ್ರಜಾಕೋಟಿಗೆ ಮೂಲಭೂತನಾದ(ಆದಿಬ್ರಹ್ಮ) ಮನುವಂತೂ ಇದನ್ನು ರಚಿಸಿರಲಾರ. ಮುಂದಿನ ಯಾರು ಇದನ್ನು ರಚಿಸಿ ತನ್ನ ಹೆಸರನ್ನು ಮರೆಸಿಕೊಂಡು ಮನುವಿನ ಹೆಸರಿನಲ್ಲಿ ಏಕೆ ಪ್ರಕಾಶಪಡಿಸಿದನೆಂಬುದಕ್ಕೆ ಕಾರಣವನ್ನು ಹೇಳುವುದಕ್ಕಾಗುವುದಿಲ್ಲ. ಈಗಿನ ಮನುಸ್ಮೃತಿಯು ಸ್ವಯಂಭುವಿನಿಂದ ಉಕ್ತವಾಗಿರುವುದಲ್ಲದೆ ಬೇರೆ ಆರು ಮನುಗಳ ಉಲ್ಲೇಖ ಅದರಲ್ಲಿದೆ.

ಈಗ ಪ್ರಚಾರದಲ್ಲಿರುವ 'ಮನುಸ್ಮೃತಿ'ಯಲ್ಲಿ ಹನ್ನೆರಡು ಅಧ್ಯಾಯಗಳು ೨೬೮೪ ಶ್ಲೋಕಗಳು ಇವೆ. ಸರಳವೂ ಋಜುವೂ ಆದ ಶೈಲಿಯಲ್ಲಿದೆ ಪಾಣಿನಿಯ ಭಾಷೆಗೆ ಸಾಮಾನ್ಯವಾಗಿ ಹೊಂದಿಕೊಳ್ಳುತ್ತದೆ ತತ್ತ್ವ ಮತ್ತು ಸಿದ್ಧಾಂತಗಳಲ್ಲಿ ಗೌತಮ ಬೋಧಾಯನ ಆಪಸ್ತಂಭ ಧರ್ಮ ಸೂತ್ರಗಳಿಗೆ ಬಹುಮಟ್ಟಿಗೆ ಸಮವಾದಿಯಾಗಿರುತ್ತದೆ ಹಾಗೆಯೇ ಕೌಟಿಲ್ಯನಿಗೂ ಇದಕ್ಕೂ ಸಮಾನವಾದ ಅನೇಕ ಭಾಗಗಳಿವೆ. ಇದರಲ್ಲಿರುವ ವಿಷಯ ವಿವರಣೆ ಉಳಿದ ಎಲ್ಲ ಸೂತ್ರ ಸ್ಮೃತಿ ನಿಬಂಧಗಳಿಗೆ ಬಹುಮಟ್ಟಿಗೆ ಸಮಾನವಾಗಿರುವುದರಿಂದ ಅದರ ವಿವರಣದಿಂದ ಇತರ ಗ್ರಂಥಗಳ ಪರಿಚಯವಾದಂತೆಯೇ ಇರುತ್ತದೆ. ಇದರ ಮೊದಲನೆಯ ಅಧ್ಯಾಯದಲ್ಲಿ ಮನುವಿನ ಉತ್ಪತ್ತಿ, ಆತನಿಗೆ ಬ್ರಹ್ಮನಿಂದ ಶಾಸ್ತ್ರೋಪದೇಶ, ಕಾಲವಿವರಣೆ, ಧರ್ಮದ ಅವನಜ, ಆದರ ಸ್ವರೂಪ ಮತ್ತು ಗುರಿ; ಚಾತುರ್ವರ್ಣಗಳು, ಆಚಾರದ ಪ್ರಾಮುಖ್ಯ ಮತ್ತು ಪ್ರಸಕ್ತ ಗ್ರಂಥಗಳ ವಿವರಣೆ ಉಕ್ತವಾಗಿದೆ. ಧರ್ಮ ಶಬ್ದಾರ್ಥದ ವಿವರಣೆ, ಧರ್ಮದ ಮೂಲ ಅದಕ್ಕೆ ಅಧಿಕಾರಿಗಳು' ಆರ್ಯಾವರ್ತದ ಸೀಮಾ ನಿಬಂಧನೆ, ಸಂಸ್ಕಾರಗಳ ಅವಶ್ಯಕತೆ, ಉಪನಯನದವರೆಗಿನ ಕರ್ಮಗಳು, ಬ್ರಹ್ಮಚರ್ಯ ಶೀಲವ್ರತ ನಿಯಮಗಳು ಎರಡನೆಯ ಅಧ್ಯಾಯದ ವಿಷಯಗಳು. ವಿವಿಧ ರೀತಿಯ ಬ್ರಹ್ಮಚರ್ಯಗಳು, ವಿವಾಹ, ಪಂಚಮಹಾಯಜ್ಞ, ಅತಿಥಿ ಪೂಜೆ, ಮಧುಪರ್ಕ, ಶ್ರಾದ್ಧ ಇವು ಮೂರನೆಯ ಅಧ್ಯಾಯದಲ್ಲಿ ಉಕ್ತವಾಗಿವೆ. ಗೃಹಸ್ಥನ ಜೀವನ ಕ್ರಮ, ಸ್ನಾತಕನ ನಿಯಮ, ಯೋಗ್ಯಾಯೋಗ್ಯ ಆಹಾರ ವಿಚಾರ ಜಾತಮೃತಾಶೌಚ, ಸಾಪಿಂಡ್ಯ ಸಮಾನೋದಕಗಳ ವಿವರಣೆ ವಿವಿಧ ಸಂಪರ್ಕಗಳ ಶುದ್ಧಿ ಕ್ರಮ ನಾಲ್ಕನೆಯದರಲ್ಲಿ ವಿಮರ್ಶಿತವಾಗಿವೆ. ವಾನಪ್ರಸ್ಥ, ಸನ್ಯಾಸಿ, ಗೃಹಸ್ಥರ ನೀತಿ ನಿಯಮಗಳನ್ನು ಕುರಿತುದು ಐದು ಆರನೆಯ ಭಾಗಗಳು. ರಾಜಧರ್ಮಕ್ಕೆ ಸೇರಿದ ದಂಡನೀತಿ, ರಾಜವಿದ್ಯೆ ಕಾಮಕ್ರೋಧ ಮೂಲವಾದ ದೋಷಗಳು, ಸಪ್ತಾಂಗಗಳು, ಚತುರೋಪಾಯಗಳು, ಕರ ಪದ್ಧತಿ, ಷಡ್ಗುಣಗಳು ಮೊದಲಾದುವು ಏಳನೆಯದರಲ್ಲಿ ಉಕ್ತವಾಗಿವೆ. ಎಂಟನೆಯದು ವ್ಯವಹಾರ ಧರ್ಮಕ್ಕೆ ಸೇರಿದುದು. ಇದರಲ್ಲಿ ರಾಜಧರ್ಮ, ವ್ಯವಹಾರದ ಅಷ್ಟಾದಶ ಭಾಗಗಳು ಪ್ರಾಡ್ವಿವೇಕ, ಸಭಾರಚನೆ, ಅಶಕ್ತ ಪೋಷಣದ ಅವಶ್ಯಕತೆ, ವ್ಯವಹಾರದ ಪರಿಶೀಲನೆ, ದೋಷ, ಸಾಕ್ಷ್ಯ, ದಂಡನಿಕ್ಷೇಪ ಋಣಾದಾನ ಸಂಪ್ರದಾಯ ನಿರಾಕರಣ, ವೈಯಕ್ತಿಕ ಶಿಕ್ಷಣ, ವ್ಯಭಿಚಾರ ಸುಂಕ, ಮತ್ತು ಏಕ ಸ್ವಾಮ್ಯ ಮೊದಲಾದುವುಗಳನ್ನು ಕುರಿತ ದೀರ್ಘ ವಿವೇಚನೆಯಿದೆ ದಾಯಭಾಗ ಸ್ತ್ರೀಧನ ಸಪ್ತಾಂಗ ಪಂಚಮಹಾಪಾತಕಗಳು, ಚಾತುರ್ವರ್ಣ್ಯದ ಜೀವನ ಕ್ರಮಗಳು ಒಂಬತ್ತನೆಯ ಅಧ್ಯಾಯದಲ್ಲಿ ವಿಮರ್ಶಿತವಾಗಿವೆ. ಪ್ರಾಯಶ್ಚಿತ್ತ ವಿಷಯಕವಾದುದು ಹತ್ತನೆಯ ಅಧ್ಯಾಯ ಹನ್ನೊಂದು ಹನ್ನೆರಡನೆಯ ಅಧ್ಯಾಯಗಳು ಆಧ್ಯಾತ್ಮಿಕ ವಿಷಯಕ್ಕೆ ಸಂಬಂಧಪಟ್ಟವು ಈ ವಿಷಯ ವಿವರಣೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಮನುವಿನ ಜ್ಞಾನವ್ಯಾಪ್ತಿ ಎಷ್ಟು ವಿಸ್ತಾರವಾದುದೆಂದು ಅರ್ಥವಾಗುತ್ತದೆ. 'ಮನುಸ್ಮೃತಿ'ಯ ಕಾಲದೇಶ ವಿಷಯಗಳನ್ನು ಅನೇಕ ಸಮಸ್ಯೆಗಳು ಹಾಗೆಯೇ ಉಳಿದಿವೆ. ಆದರೂ ಅದರ ಕಾಲವು ಕ್ರಿ. ಪೂ. ೨ನೆಯ ಶತಮಾನಕ್ಕಿಂತ ಹಿಂದಿನದಿರಬೇಕೆಂದು ಸ್ಥೂಲವಾಗಿ ಹೇಳಬಹುದು.

'ಮನುಸ್ಮೃತಿ'ಗೆ ಮೇಧಾತಿಥಿ, ಗೋವಿಂದ ರಾಜ, ಕುಲ್ಲೂಕಭಟ್ಟ, ನಾರಾಯಣ ರಾಘವಾನಂದ, ರಾಮಚಂದ್ರ ಮೊದಲಾದವರೂ, ಇವರ ಆಧಾರದ ಮೇಲೆ ಉದಯಕಾರ, ಧಾರಾಧೀಶ ಭೋಜ ದೇವ ಮತ್ತು ಧರಣೀಧರರು ಟೀಕಾವ್ಯಾಖ್ಯಾನಗಳನ್ನು ರಚಿಸಿದ್ದಾರೆ

ಸ್ಮೃತಿ ಗ್ರಂಥಗಳಲ್ಲಿ ಇನ್ನೂ ಇತರ ಅನೇಕ ಸ್ಮೃತಿಕಾರರನ್ನು ಗುರುತಿಸಬಹುದು. ಅವರಲ್ಲಿ ಯಾಜ್ಞವಲ್ಕ್ಯ, ಪರಾಶರ, ನಾರದರ ಸ್ಮೃತಿಗಳು ಮುಖ್ಯವಾದುವು

ನಾರದ ಸ್ಮೃತಿಯ ಎರಡು ಪಾಠಗಳಿವೆ ಅವುಗಳು ವ್ಯವಹಾರ ವಿಷಯಕವಾದುವು ಈಗ ಅಚ್ಚಾಗಿರುವ 'ವ್ಯವಹಾರ ಮಾತೃಕೆ'ಯಲ್ಲಿ ವ್ಯವಹಾರದ ಅಷ್ಟಾದಶ ಪದಗಳನ್ನು ಮುಂದಿನ ರೀತಿಯಲ್ಲಿ ನಿರೂಪಿಸಿದೆ. ಋಣಾದಾನ (Recovery of debts) ಉಪನಿಧಿ (deposits, lending, bailment) ಸಂಭೂಯ ಸಮುತ್ಥಾನ (Partnership) ದತ್ತ ಪ್ರಧಾನಕ (Gift and resumption there off) ಅಭ್ಯುಪೇತ ಅಶುಶ್ರೂಷ (Breach of contract of service) ವೇತನಸ್ಯ ಅನುಪಾಕರ್ಮ (Non payment of wages ಅಸ್ವಾಮಿ ವಿಕ್ರಯ (Sale without ownership) ವಿಕ್ರಯಾಸಂಪ್ರದಾನ (Non delivery ofter sale) ಕ್ರೀತಾನುಶಯ (Rescission of purchase) ಸಮಯಸ್ಯಾಪಾಕರ್ಮ (Violation of convention of Corporation and Guilds) ಸೀಮಾಬಂಧ (Settlement of bounderies), ಸಾಹಸ (Offences in which force is the principle element) ಸ್ತ್ರೀ ಪುಮಾಂಸಯೋಗ (Marital relation) ದಾಯಭಾಗ (Partition and inheritance) ವಾಕ್ಪಾರುಷ್ಯ (Defamationi and abuse) ದಂಡ ಪಾರುಷ್ಯ (Hurt of various Kinds) ಪ್ರಕೀರ್ಣಕ (Miscella–neous wrongs). ಅನುಬಂಧದಲ್ಲಿ ಸ್ತ್ರೀಯ ವಿಷಯವು ಉಕ್ತವಾಗಿವೆ ನಾರದನು ಬಹು ಮಟ್ಟಿಗೆ ಮನುಸ್ಮೃತಿಯನ್ನು ಅನುಸರಿಸುತ್ತಾನೆ. ಅಚ್ಚಾದ ಮನುಸ್ಮೃತಿಯಲ್ಲಿ ೧೦೨೮ ಶ್ಲೋಕಗಳಿವೆ. ಇವುಗಳಲ್ಲಿ ೭೦೦ಕ್ಕಿಂತ ಹೆಚ್ಚಿನವು ಹಿಂದಿನ ಗ್ರಂಥಗಳ ಅನುವಾದ ಮಾತ್ರ. ಮುಂದಿನ ಅನೇಕ ಸ್ಮೃತಿಕಾರರು ಇಲ್ಲಿಂದ ವಿಶೇಷವಾಗಿ ಅನುವದಿಸಿದ್ದಾರೆ. ಈ ಸ್ಥಿತಿಯ ಉಪೋದ್ಘಾತ ಭಾಗವಿನಾ ಉಳಿದುವೆಲ್ಲ ಪದ್ಯರೂಪದಲ್ಲಿದೆ. ನಾರದನು ಮನುವನ್ನೇ ಅನುಸರಿಸಿದ್ದರೂ ಅವನಿಗಿಂತ ಭಿನ್ನವಾದ ವೈಶಿಷ್ಟ್ಯವಿಲ್ಲದಿಲ್ಲ. ಸ್ತ್ರೀ ಪುಮಾಂಸಯೋಗದಲ್ಲಿ ೧೪ ವಿಧವಾದ ನಪುಂಸಕರನ್ನು ಮೂರುಜಾತಿಯ ನಾಲ್ಕುರೀತಿಯ ಸ್ವೈರಿಣಿಯರನ್ನು ಹೆಸರಿಸಿದ್ದಾನೆ. ಮುಂದಿನ ಅನೇಕರು ನಾರದನನ್ನು ಪರಮ ಪ್ರಮಾಣದಲ್ಲಿ ಅಂಗೀಕಾರ ಮಾಡಿದ್ದಾರೆ

ಮುಂದೆ ಬೃಹಸ್ಪತಿ ಕಾತ್ಯಾಯನರೇ ಮುಂತಾದವರು ಸ್ಮೃತಿ ಗ್ರಂಥಗಳನ್ನು ರಚಿಸಿದ್ದಾರೆ. ಹಿಂದೆಯೇ ತಿಳಿಸಿರುವಂತೆ ಸ್ಮೃತಿ ಕಾಲವಾದಮೇಲೆ ನಿಬಂಧಗಳ ಕಾಲವು ಪ್ರಾರಂಭವಾಗುವುದು. ಅವುಗಳೆಲ್ಲ ಹಿಂದಿನ ಗ್ರಂಥಗಳ ಸಂಗ್ರಹಗಳು ಮತ್ತು ತೋಲನಗಳು ಅವುಗಳಲ್ಲಿ ವಿಜ್ಞಾನೇಶ್ವರನ ಮಿತಾಕ್ಷರ, ಹೇಮಾದ್ರಿಯ ಚತುರ್ವರ್ಗ ಚಿಂತಾಮಣಿ ಮೊದಲಾದುವುಗಳು ಪ್ರಸಿದ್ಧವಾಗಿವೆ

ಸಂಸ್ಕೃತ ಸಾಹಿತ್ಯದಲ್ಲಿ ಧರ್ಮಶಾಸ್ತ್ರದ ಪ್ರಮಾಣ, ವಿಸ್ತಾರ, ವಿಚಾರ, ವಿಮರ್ಶೆ ಮೊದಲಾದುವುಗಳಿಗೆ ಕಾರಣವನ್ನು ಸುಲಭವಾಗಿ ಊಹಿಸಿಕೊಳ್ಳಬಹುದು ಈ ವಿಷಯವನ್ನು ಗೌತಮರು ತಮ್ಮ ಧರ್ಮಸೂತ್ರದಲ್ಲಿ ಮುಂದಿನ ವಾಕ್ಯಗಳಿಂದ ಸ್ಪಷ್ಟಪಡಿಸಿದ್ದಾರೆ "ದಯಾ ಸರ್ವ ಭೂತೇಷು ಶಾಂತಿರನಸೂಯ ಶೌಚಂ ಅನಾಯಾಸಃ ಮಂಗಳ ಮಕಾರ್ಪಣ್ಯಂ ಅಸ್ಪೃಹೇತಿ ಯಸ್ಯತೆ ಚತ್ವಾರಿಂಶತ್ ಸಂಸ್ಕಾರ ವಾ ಚಾಷ್ಟಾ ಆತ್ಮಗುಣಾ ನಸ ಬ್ರಹ್ಮಣ ಸಾಯುಜ್ಯಂ ಸಾಲೋಕ್ಯಂಚ ಗಚ್ಛತಿ" (ಗೌತಮ ಧರ್ಮ ಸೂತ್ರ ೮. ೨೧. ೨೨ ೨೩.) ಈ ವಾಕ್ಯಗಳ ಪ್ರಕಾರ ಧರ್ಮಶಾಸ್ತ್ರದ ಪ್ರಧಾನ ಉದ್ದೇಶ ಮಾನವನಲ್ಲಿ ಎಂಟು ಆತ್ಮಗುಣಗಳನ್ನು ಮೂರ್ತೀಕರಿಸುವುದು ಈ ಉದ್ದೇಶ ಕಾಲದೇಶ ವರ್ತಮಾನಗಳ ನಿರ್ಬಂಧ ವಿಲ್ಲದೆ ಎಲ್ಲರಿಗೂ ಭಾವ್ಯವಾದುದೇ. ಆ ದೃಷ್ಟಿಯಿಂದ ಧರ್ಮಶಾಸ್ತ್ರ ಗ್ರಂಥಗಳು ಮಾರ್ಗದರ್ಶಕವಾಗಿರುವ ದಿವ್ಯಜ್ಯೋತಿಗಳಾಗಿರತಕ್ಕವು

# ಶ್ರೀ ನಾರಸಿಂಹ ಚರಿತಾಮೃತ

ಶ್ರೀಹರಿ ಒಮ್ಮೆ ವರ ಲಕುಮಿ ಸಹಿತ
ಪವಡಿಸಿಹನುರಗ ಮಂಚದಲಿ ।
ಮಹಾಮಹಿಮನ ಸೇವೆಯಲಿ ನಿಂದಿಹರು
ಜಯ ವಿಜಯರು ಮಹಾ ದ್ವಾರದಲಿ ॥ ॥ ೧ ॥

ದೇವ ದೇವೋತ್ತಮನ ದರುಶನಕೆಂದು
ಬಂದರು ಸನಕಾದಿ ಮುನಿಗಳು।
ಶ್ರೀ ವರನು ಪವಡಿಸಿರ್ಪಾ ಕಾರಣದಿ
ಬಿಡದೆ ತಡೆದರು ಜಯ ವಿಜಯರು॥ ॥ ೨ ॥

ಕೆರಳಿದಾ ಸನಕಾದಿಗಳು ರೋಷದಿ
ಜಲವನೆಸೆಯುತಲಿ ಶಪಿಸಿದರು ।
ಧರೆಯಲಿ ನೀವ್ ಪುಟ್ಟಿ ಹರಿಚರಣದಿಂ
ದಗಲಿ ಬಾಳಿರೆನುತ ನುಡಿದರು ॥ ॥ ೩ ॥

ಕಂಪಿಸುತ ಕರಗಳ ಮುಗಿದು ನಿಂದರು
ಕಿಂಕರರಾಗಿ ಜಯ–ವಿಜಯರು ।
ಗುಂಪನಗಲಿದ ಹರಿಣಗಳ ತೆರದೊಳು
ಹರಿಯ ಚರಣದಿ ಕವಿದು ಬಿದ್ದರು ॥ ॥ ೪ ॥

ಸನಕಾದಿಗಳ ಶಾಪಕೆ ಪುಸಿಯುಂಟೆ ?
ಸಪ್ತ ಜನುಮದಿಪುಟ್ಟಿರಿತರಾಗಿ ।
ಜನಿಸಿ ಇಲ್ಲವಾದರೆ ಮೂರು ಜನ್ಮದಿ
ಎನಗೆ ನೀವ್ ಹಗೆಗಳಾಗಿ ॥ ॥ ೫ ॥

ಶ್ರೀರಮಣನೀ ಪರಿ ನುಡಿಯೆ ಜಯ
ವಿಜಯರು ಕಂಬನಿಗೂಡಿ ಪೇಳ್ದರು ।
ತೊರೆದು ನಿನ್ನನು ಬಹು ಕಾಲ ಬಾಳೆವು
ಹಗೆಯಾಗಿ ಕೂಡ್ವೆವೆಂದರು ॥ ॥ ೬ ॥

ಹಿರಣ್ಯಾಕ್ಷ ನಾಮದಿ ಜನಿಸಿ ಹರಿ ದಯದಿ
ಮುಕ್ತಿಹೊಂದಿದನು ದಾನವನು ।
ಉಳಿದಿನ್ನೊಬ್ಬ ಹಿರಣ್ಯಕಶಿಪು
ನಾಸ್ತಿಕನಾಗಿ ಮೆರೆಯುತ್ತಿದ್ದನು ॥ ॥ ೭ ॥

ವಿರಂಚಿ ಮೆಚ್ಚಿಸಿ ವರವ ಪಡೆದನು
ಜೀವಿ ಜಂತುವಿನಿಂ ಮರಣವಿಲ್ಲೆಂದು ।
ಸುರಮುನಿಗಳ ಹಿಡಿದು ಹಿಂಸಿಸುತಲಿದ್ದ
ತನ್ನನರ್ಚಿಸಿರಿ ನೀವೆಂದು ॥ ॥ ೮ ॥

ಅಸುರನುಪಟಳ ಹೆಚ್ಚಲಾಗ ಹರಿಯು
ಭಕುತನೋರ್ವನ ಕಳುಹಿದನು।
ಅಸುರನ ಸತಿ ಕಯಾದುವುದರದಲಿ
'ಪ್ರಹ್ಲಾದ'ನಾಗಿ ಪುಟ್ಟಿಂದನು ॥ ॥ ೯ ॥

ಕೆಸರಲಿ ಪುಟ್ಟುವ ತಾವರೆಯಂದದಿ
ಅಸುರನಲಿ ಉದಿಸಿದ ಪ್ರಹ್ಲಾದ ।
ಬಿಸಜನಾಭನ ಭಜಿಸುತ ಶ್ರೀಹರಿ
ಕೃಪೆಗೆ ತಾ ನತಿ ಪ್ರಿಯನಾದ ॥ ॥ ೧೦ ॥

ಕುವರನ ಕಂಡು ಕಿಡಿಕಿಡಿಯಾದನಸುರ
ಉಣಿಸಿದ ಪಾಲೊಳು ನಂಜನ್ನು ।
ಹಾವಿನಿಂ ಕಡಿಸಿ ಗಿರಿಯಿಂ ದೂಡಿಸಿ
ಹಿಂಸೆಯಿತ್ತರೂ ಸುಖಿ ಅವನು ॥ ॥ ೧೧ ॥

ಪಿತನೆ ಹರಿಯೊಳು ಕಲಹದು ತರವಲ್ಲ
ಶರಣಾಗಿ ಮೊದಲು ನೀವಿನ್ನು ।
ಆತನೆ ಸರ್ವಶಕ್ತನು ದೀನ ರಕ್ಷನು
ಎಂದು ಪೇಳಿದನಾ ಕುವರನು ॥ ॥ ೧೨ ॥

ಎಲೆ ಅವಿವೇಕಿ ಮರುಳೆ ಎಲ್ಲಡಗಿಹನು
ನಿನ್ನಯ ಹರಿ ಎನಲು ಅಸುರ ।
ಕಲ್ಲಲ್ಲಿ ಮಣ್ಣಲ್ಲಿ ಗಾಳಿಯಾಗಸದಲಿ
ಎಲ್ಲೆಲ್ಲು ಇಹನೆಂದನಾ ಕುವರ ॥ ॥ ೧೩ ॥

ಕುಣಿಸಿದವು ಮೀಸೆಗಳ ಕೆಂಪೇರಿದವು
ಕಂಗಳ ಕುವರನುತ್ತರವು ।
ನೆಣಗೊಬ್ಬಿನಲಿ ಗದೆ ಎತ್ತಿ ಕೇಳಿದ
ಈ ಕಂಭದೊಳುಂಟೆ ನಿನ್ನ ಹರಿಯು ॥ ॥ ೧೪ ॥

ಹೌದು ಪಿತನೇ ಎಂದು ಪ್ರಹ್ಲಾದನೆನೆ
ಒಡೆದನಾ ಕಂಭವನು ಅಸುರನು ।
ಗದೆಯ ಕರದಿ ಪಿಡಿದು ಅರ್ಧನರ ರೂಪಿ
ಹೊರ ಜಿಗಿದನು ನರಸಿಂಹನು ॥ ॥ ೧೫ ॥

ಕರದಿ ಶಂಖ ಚಕ್ರ ಗದಾಪಾಣಿಯಾಗಿ
ಮೇಲೆರಗಿದ ಶ್ರೀ ನೃಸಿಂಹನು ।
ದುರುಳನ ಸಿಗಿದು ಕರುಳಮಾಲೆಯ ಧರಿಸೆ
ಮಡಿದು ಮಲಗಿದ ನಿಶಾಚರನು ॥ ॥ ೧೬ ॥

ಜಯತು ಜಯವರ ಶ್ರೀನಾರಸಿಂಹನೆ
ಕಡುದೀನಜನಮಂದಾರನೆ।
ಜಯತು ಜಯವರ ಸಿರಿ ಲಕ್ಷ್ಮೀಲೋಲನೆ
ಭಕ್ತ ಪ್ರಹ್ಲಾದನಾ ಪೋಷನೆ ॥ ॥ ೧೭ ॥

ಒಮ್ಮನದಿಂ ಪ್ರಹ್ಲಾದ ಶ್ರೀಹರಿಯ
ನತಿ ವಿನಯದಿಂ ಭಜಿಸಿದನು ।
ಪ್ರೇಮದಿಂದಲಿ ಸಿರಿನಾರಸಿಂಹನು
ಅಭಯವನು ತಾ ನಿತ್ತನು ॥ ॥ ೧೮ ॥

ಹರಿಯ ದಾಸನು ಪುಣ್ಯಶೀಲನು ಕಮಲ–
ನಾಭನಾ ಭಕುತ ಪ್ರಹ್ಲಾದನು ।
ನರಸಿಂಹನ ಕರುಣದಿ ಅರಸ ತಾನಾಗಿ
ಕೀರುತಿಯಿಂದಲಿ ಬಾಳ್ದನು ॥ ॥ ೧೯ ॥

— ಕವಿತಾಕೃಷ್ಣ

# ಶ್ರೀ ಪರಾಶರ ಭಟ್ಟರ ಅಷ್ಟಶ್ಲೋಕೀ

ಭಾಗವತೋತ್ತಮರ ಜೀವನವು ಬೋಧಪ್ರದ ಮತ್ತು ಉತ್ತಾರಕ ಪೂರ್ವಾಚಾರ್ಯರುಗಳ ಮತದಂತೆ ಭಗವತ್ಕೈಂಕರ್ಯಕ್ಕಿಂತಲೂ ಭಾಗವತ ಕೈಂಕರ್ಯವು ಶ್ರೇಷ್ಠವಾದುದು ಮತ್ತು ಉತ್ತಮವಾದ ಧರ್ಮ ಭಾಗವತ ಕೈಂಕರ್ಯವು ಭಗವತ್ ಕೈಂಕರ್ಯದ ಸೀಮಾಭೂಮಿ, ಮತ್ತು ಪ್ರಧಾನವಾದುದು ಆಗಿರುತ್ತದೆ. "ಪೂಜನಾ ದ್ವಿಷ್ಣು ಭಕ್ತಾನಾಂ। ಪುರುಷಾರ್ಥೋಸ್ತಿ ನೇತರಃ"–ವಿಷ್ಣು ಭಕ್ತರ ಪೂಜೆಗಿಂತ ಅತಿಶಯವಾದ ಪುರುಷಾರ್ಥವೇ ಇಲ್ಲ ಎಂದು ಹೇಳಿದೆ. ಆದ್ದರಿಂದ ಭಾಗವತ ಕೈಂಕರ್ಯದಲ್ಲಿ ಭಗವತ್ಕೈಂಕರ್ಯವೆಂಬ ಮಹಾನಿಷ್ಠೆಯು ಅಡಗಿರುವುದು.

ಆಳ್ವಾರುಗಳು ಮತ್ತು ಆಚಾರ್ಯರುಗಳು ಭಕ್ತಿ ಪಂಥಕ್ಕೆ ಸೇರಿದ ಭಾಗವತರುಗಳು; ಭಕ್ತಿ ಎಂದರೆ ಸಾಂಗತ್ಯಾಕಾಂಕ್ಷೆ.

ಶ್ರೀಮಂತನಾದ ಭಗವಂತನು ನಿತ್ಯಮುಕ್ತರೆಂಬ ತನ್ನ ಪರಿಷದ್ವರ್ಗದಲ್ಲಿ ಅನನ್ತ, ಗರುಡ, ವಿಷ್ವಕ್ಸೇನಾದಿಗಳೆಂಬ ನಿತ್ಯಸೂರಿಗಳಾದ ಕೆಲವರನ್ನು ಈ ಭೂಲೋಕದಲ್ಲಿ ಅವತರಿಸುವಂತೆ ಪ್ರೇರಿಸಿ, ಅವರಿಗೆ ದಿವ್ಯಜ್ಞಾನವನ್ನು ಅನುಗ್ರಹಿಸಿ, ಅವರ ಮೂಲಕ ನಾಲ್ಕುಸಹಸ್ರ ದ್ರಾವಿಡ ದಿವ್ಯ ಪ್ರಬನ್ಧಗಳನ್ನು "ಭಕ್ತಿ ಪರೀವಾಹ ರೂಪವಾದ ಅಮೃತ ಸಾಗರದಲ್ಲಿ ಸಕಲ ಚೇತನರೂ ನಿಷ್ಣಾತರಾಗಿ ಉಜ್ಜೀವಿಸಲಿ" ಎಂಬ ಉದ್ದೇಶದಿಂದ ಪ್ರಚಾರ ಪಡಿಸಿದನು. ಈ ನಿತ್ಯಸೂರಿಗಳೇ ಹನ್ನೆರಡು ಜನ ಆಳ್ವಾರುಗಳು. ಅವರ ಸಾಕ್ಷಾತ್ಕರಿಸಿಕೊಂಡ ಬ್ರಹ್ಮಸ್ವರೂಪ ಮತ್ತು ಗುಣಗಳನ್ನು ಅತಿರಮ್ಯವಾದ ತಮಿಳಿನ ತಿರುವಾಯಿಮೊಳಿ ಗ್ರಂಥಗಳಲ್ಲಿ ಸಾಮಗಾನಯೋಗ್ಯವಾದ ಪದ್ಯಗಳಲ್ಲಿ ಹುದುಗಿಸಿರುವರು. ಈ ಪದ್ಯಗಳಲ್ಲಿ ಜ್ಞಾನಸ್ವರೂಪಿಯಾದ ಪರಮಾತ್ಮನ ಮತ್ತು ಶರಣಾಗತಿಯ ಪ್ರಭಾವವನ್ನು ಬಿತ್ತರಿಸಿದ್ದಾರೆ.

ಆಳ್ವಾರುಗಳ ಕಾಲವಾದಮೇಲೆ ಆರಂಭವಾದದ್ದು ಆಚಾರ್ಯರುಗಳ ಕಾಲ. ಮುಂದೆ ಬಂದ ಆಚಾರ್ಯರುಗಳು ಆಳ್ವಾರುಗಳ ಧ್ಯಾನಯೋಗದ ಅನುಭವಗಳ ಆಧಾರವನ್ನು ಹೊಂದಿದ ದರ್ಶನವನ್ನು ಕ್ರಮಬದ್ಧವಾಗಿ ನಿರೂಪಿಸಿದರು ತನ್ಮಯತೆಯ ಭಕ್ತಿ ಮತ್ತು ಭಗವದನುಭವವೇ ಆಳ್ವಾರುಗಳ ನಿಷ್ಠೆಯಾದರೆ, ಅದರೊಡನೆ ಜ್ಞಾನೋಪದೇಶವೂ ಮುಖ್ಯವಾಗಿ, ಆಚಾರ್ಯರುಗಳ ವೈಶಿಷ್ಟ್ಯವಾಗಿದೆ. ಆಳ್ವಾರುಗಳು ಸಂತರು, ಆಚಾರ್ಯರು ತತ್ತ್ವಜ್ಞಾನವನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸಿದವರು. ಶಾಸ್ತ್ರಾರ್ಥಗಳನ್ನು ಉಪದೇಶಿಸುವವರೂ, ಲೋಕವನ್ನು ಸದಾಚಾರದಲ್ಲಿ ನೆಲೆಸುವಂತೆ ಮಾಡಿದವರೂ, ಉಪದೇಶಿಸಿದಂತೆ ಅನುಷ್ಠಾನದಲ್ಲಿ ತೋರಿಸುವವರೂ ಆಚಾರ್ಯರು. ತಾವು ಪಡೆದುಕೊಂಡ ಜ್ಞಾನವನ್ನು ಉಪದೇಶ ಮಾಡಿ ಚೇತನನ ಅಜ್ಞಾನಾಂಧಕಾರವನ್ನು ನೀಗಿಸುವವರೇ ಆಚಾರ್ಯರು.

ನಾಲ್ಕುಸಾವಿರ ಪದ್ಯಗಳನ್ನು ರಚಿಸಿದ ಆಳ್ವಾರುಗಳ ಪರಂಪರೆಯೊಂದಾದರೆ, ಅವುಗಳ ಉಪದೇಶ ಪರಂಪರೆಯಿಂದ ಆಚಾರ್ಯರ ಪರಂಪರೆಯುಂಟಾಯಿತು. ಈ ಆಚಾರ್ಯ ಪರಂಪರೆಗೆ ಶ್ರೀ ಲಕ್ಷ್ಮೀನಾಥನೇ ಮೊದಲಿಗನಾಗಿ ನಮ್ಮನ್ನು ಉದ್ಧರಿಸುವ ಉದ್ದೇಶದಿಂದ ಆಚಾರ್ಯ ಕೃತ್ಯ ನಡೆಸಲು ಬಂದನು. ಆದುದರಿಂದಲೇ "ಆಚಾರ್ಯಾದಿಹ ದೇವತಾಂ ಸಮಧಿಕಾಂ ಅನ್ಯಾಂ ನ ಮನ್ಯಾಮಹೇ" ಎಂದು ಆಚಾರ್ಯರ ಹಿರಿಮೆಯನ್ನು ಕೊಂಡಾಡಲಾಗಿದೆ. ಆಚಾರ್ಯರ ಉಪದೇಶ ಶರಣಾಗತಿಯೇ ಹೊರತು ಮತ್ತೇನೂ ಅಲ್ಲ ಗೀತೋಪದೇಶವೂ ಶರಣಾಗತಿಯೇ ಆಗಿದೆ ಪ್ರಪತ್ತಿಯ ಪ್ರಭಾವವನ್ನು ಆಚಾರ್ಯರ ಮೂಲಕವೇ ಅರಿಯಬೇಕೆಂಬುದು ವಿಶಿಷ್ಟಾದ್ವೈತ ಸಿದ್ಧಾಂತದ ಮುಖ್ಯಾಂಶ. ಇಲ್ಲಿಯೂ ಆಚಾರ್ಯರ ಮಹಿಮೆ ವ್ಯಕ್ತವಾಗುತ್ತದೆ.

ಪ್ರಾಚೀನ ಆಚಾರ್ಯರುಗಳಲ್ಲಿ ನಾಥಮುನಿಗಳು ಮೊದಲಿಗರಾಗಿದ್ದಾರೆ. ಇವರು ಅವತರಿಸುವ ಕಾಲಕ್ಕೆ ತಿರುವಾಯ್ಮೊಳಿ ಪ್ರಬಂಧಗಳೆಲ್ಲಾ ಲುಪ್ತವಾಗಿದ್ದುವು. ಮಧುರ ಕವಿಗಳಿಂದ ರಚಿತವಾದ 'ಕಣ್ಣಿನುಣ್ ಶಿರುತ್ತಾಂಬು' ಎಂಬ ಪ್ರಬಂಧವನ್ನು ನಮ್ಮಾಳ್ವಾರ್ ಚರಣಕಮಲಗಳನ್ನೇ ಏಕಾಗ್ರಚಿತ್ತದಿಂದ ಧ್ಯಾನಿಸುತ್ತಾ, ಹನ್ನೆರಡುಸಹಸ್ರ ಆವೃತ್ತಿ ಪಠಿಸಿದಾಗ, ಪ್ರಸನ್ನರಾದ ನಮ್ಮಾಳ್ವಾರರಿಂದ ನಾಲ್ಕುಸಾವಿರ ದಿವ್ಯಪ್ರಬಂಧಗಳನ್ನೂ, ರಹಸ್ಯತ್ರಯವನ್ನೂ ಮತ್ತು ಯೋಗ ರಹಸ್ಯವನ್ನೂ ಪಡೆದರೆಂದು ಪ್ರಸಿದ್ಧಿ ಇದೆ. ತಾವು ಸಂಗ್ರಹಿಸಿದ ನಾಲ್ಕು ಸಾವಿರ ಪ್ರಬಂಧಗಳನ್ನು ಪರಿಷ್ಕರಿಸಿ ತಮ್ಮ ಶಿಷ್ಯರಿಗೂ ಬೋಧಿಸಿದರು. ಶ್ರೀವೈಷ್ಣವ ಧರ್ಮವನ್ನು ಸಾರ್ವತ್ರಿಕವಾಗಿ ಹರಡಿದ ಪುಣ್ಯಶ್ಲೋಕರು ಇವರು. ಶ್ರೀವೈಷ್ಣವಾಚಾರ್ಯರಲ್ಲಿ ಅಗ್ರಸ್ಥಾನವನ್ನು ಪಡೆದಿದ್ದಾರೆ

ನಾಥಮುನಿಗಳ ನಂತರ, ಅವರ ಮೊಮ್ಮಕ್ಕಳಾದ ಆಳವಂದಾರ್ ಅಥವಾ ಯಾಮುನಾಚಾರ್ಯರು ತಮ್ಮ ಅಪಾರವಾದ ಪಾಂಡಿತ್ಯದಿಂದ ಶ್ರೀವೈಷ್ಣವಧರ್ಮದ ಜ್ಯೋತಿಯು ಎಂದಿಗೂ ಬೆಳಗುವಂತೆ ಸಾಧಿಸಿದರು. ಇವರು ಲಕ್ಷ್ಮೀಪ್ರಪದನ ರೂಪವಾದ ಚತುಃಶ್ಲೋಕಿಯನ್ನೂ, ಭಗವತ್ಪ್ರಪದನ ರೂಪವಾದ 'ಸ್ತೋತ್ರರತ್ನ'ವನ್ನೂ ರಚಿಸಿ ಅನುಗ್ರಹಿಸಿದರು ವಿಶಿಷ್ಟಾದ್ವೈತ ದರ್ಶನವನ್ನು ಪ್ರತಿಪಾದಿಸುವ ಗ್ರಂಥಗಳ ಅಭಾವವನ್ನು ತುಂಬುವುದಕ್ಕಾಗಿ, ಮತಾಂತರಗಳಲ್ಲಿ ನ್ಯೂನತೆಯನ್ನೂ ಕಂಡು ಖಂಡಿಸಿ, ಆಗಮ ಪ್ರಾಮಾಣ್ಯ, ಗೀತಾರ್ಥ ಸಂಗ್ರಹ ಮತ್ತು ಆತ್ಮಸಿದ್ಧಿ, ಸಂವಿತ್ಸಿದ್ಧಿ, ಈಶ್ವರಸಿದ್ಧಿ ಎಂಬ ಸಿದ್ಧಿತ್ರಯವನ್ನು ರಚಿಸಿದರು. ಈ ಗ್ರಂಥಗಳೆಲ್ಲವೂ ಬೇಗ ಸರ್ವಜನಾದರಣೀಯಗಳಾಗಿ ಯಾಮುನಾಚಾರ್ಯರ ಹೆಸರು ಸರ್ವತ್ರ ಹರಡಿತು



**ಶ್ರೀಮತಿ ಬಿ. ಎಸ್. ಮಣಿ**

ಶ್ರೀರಂಗದಲ್ಲಿ ಆಚಾರ್ಯಪೀಠವನ್ನು ಅಲಂಕರಿಸಿದ್ದ ಯಾಮುನರು ಕಾಂಚೀಪುರಕ್ಕೆ ಹೋಗಿದ್ದಾಗ ಯಾದವ ಪ್ರಕಾಶರಲ್ಲಿ ಅಧ್ಯಯನ ಮಾಡುತ್ತಿದ್ದ ರಾಮಾನುಜರನ್ನು ಕರುಣಾಕಟಾಕ್ಷದಿಂದ ವೀಕ್ಷಿಸಿ ಅವರೇ ತಮ್ಮ ಉತ್ತರಾಧಿಕಾರಿಗಳಾಗಲೆಂದು ಆಶಿಸಿದರು. ಯಾಮುನರ ಕಾಲಾನಂತರ ರಾಮಾನುಜಾಚಾರ್ಯರು ಆಚಾರ್ಯ ಶಿಷ್ಯಕೋಟಿಯಿಂದ ಅಭ್ಯರ್ಥಿತರಾಗಿ ಶ್ರೀರಂಗಕ್ಕೆ ಬಂದು ಆಚಾರ್ಯ ಪೀಠವನ್ನಲಂಕರಿಸಿದರು. ರಾಮಾನುಜಾಚಾರ್ಯರ ಕಾಲದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತ ಬಹುಮುಖವಾಗಿ ವ್ಯಾಪಿಸಿ, ಸಮೃದ್ಧಿಯಾಗಿ ಬೆಳೆಯಿತು. ಅದುವರೆಗೂ ಪರಮಗೋಪ್ಯವಾಗಿದ್ದ 'ತಿರುಮಂತ್ರ' ಅವರಿಂದ ಅನೇಕ ಸಹಸ್ರ ಶಿಷ್ಯರಿಗೆ ಉಪದೇಶಿಸಲ್ಪಟ್ಟಿತು.

ಆಚಾರ್ಯರು ಮತಪ್ರಸಾರಕ್ಕಾಗಿ ಎಪ್ಪತ್ತನಾಲ್ಕು ಸಿಂಹಾಸನಾಧಿಪತಿಗಳನ್ನು ನಿಯಮಿಸಿದ್ದರು. ಅಸಂಖ್ಯರಾದ ಪರಿವ್ರಾಜಕರೂ, ಏಕಾಂತಿಗಳೂ, ಕೈಂಕರ್ಯಪರರೂ ಅವರ ಶಿಷ್ಯಕೋಟಿಯಲ್ಲಿದ್ದರು. ಅಸಂಖ್ಯಾತರಾದ ಸಾಧಕರಿಗೆ ಆಧ್ಯಾತ್ಮಿಕ ಸಾಧನೆಯ ಮಾರ್ಗವನ್ನುಪದೇಶಿಸಿದರು ಯಾಮುನಾಚಾರ್ಯರ ಮನೋರಥವನ್ನು ಪೂರೈಸಲು ಕೂರೇಶರೆಂಬ ಆತ್ಮಸಮ ಶಿಷ್ಯರೊಡನೆ ಕಾಶ್ಮೀರಕ್ಕೆ ತೆರಳಿ ಬೋಧಾಯನವೃತ್ತಿ ಗ್ರಂಥವನ್ನು ಪರಾಂಬರಿಸಿ ಯಾಮುನಾಚಾರ್ಯರ ದರ್ಶನ ಕ್ರಮಕ್ಕೆ ಹೊಂದಿಕೊಂಡಿರುವುದನ್ನು ಕಂಡು, ಆದರಂತೆ ಶ್ರೀಭಾಷ್ಯ ಗ್ರಂಥವನ್ನು ರಚಿಸಿ "ಯಾಮುನೇಯ ದರ್ಶನಸ್ಥಾಪನಾಚಾರ್ಯ" ರೆನಿಸಿದರು ಶ್ರೀರಂಗನಾಥನ ದಿವ್ಯಮೂರ್ತಿಯನ್ನು ಸೇವಿಸುತ್ತಾ ಸಾನ್ನಿಧ್ಯ ಸಂಪತ್ತಿರೂಪವಾದ ಗದ್ಯತ್ರಯವನ್ನು ರಚಿಸಿದರು ಭಗವದ್ಗೀತೆಗೆ ಭಾಷ್ಯವನ್ನು ನಿರ್ಮಾಣಮಾಡಿದರು. ಬ್ರಹ್ಮಸೂತ್ರಗಳಿಗೆ ಶ್ರೀಭಾಷ್ಯವನ್ನು ಬರೆಯಿಸಿದರು. ತಿರುಪತಿಯಲ್ಲಿ ಶ್ರೀನಿವಾಸನ ಮುಂದೆ ಆಚಾರ್ಯರು ಮಾಡಿದ ಉಪನ್ಯಾಸವೇ ವೇದಾರ್ಥ ಸಂಗ್ರಹವೆಂಬ ಗ್ರಂಥರೂಪ ಹೊಂದಿತು. ಶ್ರೀಭಾಷ್ಯದ ಸಂಗ್ರಹರೂಪಗಳಾದ ವೇದಾಂತಸಾರ, ವೇದಾಂತದೀಪ ಮೊದಲಾದ ಸಂಕ್ಷಿಪ್ತವಾದ ಬ್ರಹ್ಮಸೂತ್ರವಿವರಣೆಗಳು ಸಿದ್ಧವಾದುವು. ಇವರ ಒಂಬತ್ತು ಕೃತಿಗಳೂ ಸಾರತಮವಾಗಿ ಸಿದ್ಧಾಂತದ ಸಕಲಾಂಶಗಳನ್ನೂ ಸಮಗ್ರವಾಗಿ ಸಮರ್ಥಿಸುತ್ತವೆ. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಿ ಶ್ರೀಭಾಷ್ಯಕಾರರಾದರು

ರಾಮಾನುಜರ ನಂತರ " ಎಂಬಾರ್ " ಎಂಬುವರು ಆ ಮತ ಪ್ರಸಾರಕ್ಕೆ ನಿಂತರು. ಇವರಿಗೆ ಗೋವಿಂದಭಟ್ಟರು ಎಂದು ಹೆಸರು. ಇವರಿಗೆ ರಾಮಾನುಜಾಚಾರ್ಯರೇ ಸನ್ಯಾಸಾಶ್ರಮವ ಕೊಟ್ಟು, ತಮ್ಮ ಪದಚ್ಛಾಯರಾಗಿ ಸ್ವೀಕರಿಸಿದರು. ಇವರಾದ ಮೇಲೆ ಗುರುಪರಂಪರೆಯ ಪಟ್ಟಾಧಿಕಾರಿಗಳಲ್ಲಿ ಬರುವವರು " ಪರಾಶರಭಟ್ಟರು ", ಶ್ರೀಸೂಕ್ತಿಸಿಂಹಾಸನಕ್ಕೆ ಉತ್ತಮಾಧಿಕಾರಿಗಳಾದರು

ಶ್ರೀಪರಾಶರ ಭಟ್ಟಾರ್ಯಃ
ಶ್ರೀ ರಂಗೇಶ ಪುರೋಹಿತಃ!
ಶ್ರೀ ವತ್ಸಾಂಕಸುತಃ ಶ್ರೀಮಾನ್
ಶ್ರೇಯಸೇ ಮೇಽಸ್ತು ಭೂಯಸೇ ॥

ವತ್ಸಾಂಕರವರೇ ಕೂರೇಶ ಅಥವಾ ಕುರುತ್ತಾಳ್ವಾನ್‌ರವರು. ಇವರೇ ವತ್ಸಚಿಹ್ನ ಮಿಶ್ರ ಎಂಬ ಮಹನೀಯರು. ರಾಮಾನುಜಾಚಾರ್ಯರ ಮುಖ್ಯ ಶಿಷ್ಯರಾಗಿ ಮತ್ತು ಅವರ ಕಮಂಡಲದಂತೆ ಇದ್ದರು. ಕೂರತ್ತಾಳ್ವಾರರ ಮಕ್ಕಳೇ ಪರಾಶರಭಟ್ಟರು, ಸಹೋದರ ವೇದವ್ಯಾಸಭಟ್ಟರು. ಆಂಡಾಳಮ್ಮಾಳ್ ಎಂದು ಇವರ ತಾಯಿಯ ಹೆಸರು. ಪರಾಶರಭಟ್ಟರು ವೈಯಾಶಿ ತಿಂಗಳು ಶುಕ್ಲಪಕ್ಷ ಅನೂರಾಧಾನಕ್ಷತ್ರದಲ್ಲಿ ಹುಟ್ಟಿದರು. ಇವರಿಗೆ ರಾಮಾನುಜರು ವೇದಾಂತದರ್ಶನದಲ್ಲಿ ವಿಶೇಷವಾದ ಶಿಕ್ಷಣ ಕೊಡಲು ಎಂಬಾರವರನ್ನೇ ನೇಮಿಸಿದ್ದರು.

ಇವರು ಪರಮಾದರಣೀಯ ಆಚಾರ್ಯರು. ರಾಮಾನುಜಾಚಾರ್ಯರಾದ ಮೇಲೆ ವಿಶಿಷ್ಟಾದ್ವೈತ ಪಂಥಾನುಗುಣವಾದ ತಾರ್ಕಿಕರಲ್ಲಿ ಇವರೇ ಪರಮೋತ್ತಮರೆಂದು ನಿರ್ವಿವಾದ. ಅಪ್ರತಿಮ ಪಾಂಡಿತ್ಯದಿಂದ ಕೂಡಿದ್ದರಲ್ಲದೇ, ಆಳವಂದಾರ್ ಅವರಂತೆಯೇ ಭಟ್ಟರು ಮಹಾಮೇಧಾವಿಗಳು. ಮಣ್ಣನಲ್ಲಾಡುತ್ತಿರುವ ವಯಸ್ಸಿನಲ್ಲಿಯೇ ಅತ್ಯಂತ ತೀಕ್ಷ್ಣಮತಿಗಳೆಂದು ಪ್ರಸಿದ್ಧರಾಗಿದ್ದರು. ಇವರ ಹಿರಿಮೆಯನ್ನು ಎರಡು ಸಂದರ್ಭಗಳಲ್ಲಿ ತಿಳಿಯಬಹುದು.

ಒಂದು ಸಲ ಶ್ರೀರಂಗಕ್ಕೆ ಸರ್ವಜ್ಞಭಟ್ಟರೆಂಬ ಮಹಾ ವಿದ್ವಾಂಸರು ಬಂದಿರುವುದನ್ನು ತಿಳಿದು, ಅವರಾರೆಂದು ಪರಾಶರಭಟ್ಟರು ಕೇಳಲು 'ವಾದದಲ್ಲಿ ಸೋಲನ್ನೇ ಕಾಣದ ಸಮರ್ಥರು' ಎಂಬುದಾಗಿ ಜನರು ಹೇಳಿದರಂತೆ. ಈ ಸುದ್ದಿಯನ್ನು ಕೇಳಿದ ಭಟ್ಟರು, ಕೈಯಲ್ಲಿ ಒಂದು ಹಿಡಿ ಮಣ್ಣನ್ನು ಹಿಡಿದು ಅದರ ಕರಾರುವಾಕ್ಕಾದ ಪರಿಮಾಣವನ್ನು ತಿಳಿಸುವಂತೆ ಸರ್ವಜ್ಞಭಟ್ಟರನ್ನು ಕೇಳಿದರಂತೆ. ಥಟ್ಟನೆ ಬಂದ ಪ್ರಶ್ನೆಯಿಂದ ಸರ್ವಜ್ಞಭಟ್ಟರು ಅಪ್ರತಿಭರಾಗಿ ಏನು ಹೇಳಲಿಲ್ಲವಂತೆ. ಆಗ ಹುಡುಗ ನಗುತ್ತಾ ಉತ್ತರಿಸಿದ "ಇಷ್ಟು ತಿಳಿಯಲಿಲ್ಲವೆ ನಿಮಗೆ, ಇದರಲ್ಲಿರುವದು ಒಂದು ಹಿಡಿ ಮಣ್ಣು" ಈ ಉತ್ತರ ಅವರ ಸರ್ವಜ್ಞತ್ವಕ್ಕೆ ಒಂದು ಸವಾಲಿನಂತಿತ್ತು. ನಂತರ ಸರ್ವಜ್ಞಭಟ್ಟರಿಗೆ ಆ ಹುಡುಗ

ಕೂರತ್ತಾಳ್ವಾರರ ಮಗ ಪರಾಶರ್‌ಭಟ್ಟರ್ ಎಂದು ತಿಳಿಯಿತು ಪರಾಶರಭಟ್ಟರವರ ಬುದ್ಧಿ ಪ್ರಖರತೆಯನ್ನು ಕಂಡು ಆನಂದಭರಿತರಾಗಿ ಬಾಲಕನನ್ನು ಕೂರೇಶರಿಗೆ ಒಪ್ಪಿಸಿ "ಮಗುವಿಗೆ ದೃಷ್ಟಿ ತಾಗೀತು, ಚೆನ್ನಾಗಿ ಕಾಪಾಡಿಕೊಂಡು ಬನ್ನಿ" ಎಂದು ತಿಳಿಸಿ ಆಶೀರ್ವದಿರಂತೆ

ಎರಡನೆ ಸಂದರ್ಭ ಬಹಳ ಗಂಭೀರವಾದದ್ದು ಮತ್ತು ಪರಮಾತ್ಮನ ಕಡೆಗೆ ಅವರ ಪರಿಪಕ್ವವಾದ ಮನಸ್ಸನ್ನು ಸ್ಪಷ್ಟಪಡಿಸುತ್ತದೆ

ಒಮ್ಮೆ ಧನುರ್ಮಾಸದಲ್ಲಿ 'ತಿರುಪ್ಪಾವೈ' ಕಾಲಕ್ಷೇಪ ನಡೆಸಿದ ನಂತರ ಭಕ್ತಾದಿಗಳನ್ನು ಕುರಿತು, ತಿರುಪ್ಪಾವೈಯಲ್ಲಿನ ಮುವತ್ತು ಪಾಶುರಗಳನ್ನು ಪ್ರತಿನಿತ್ಯವು ಅನುಸಂಧಾನ ಮಾಡಬೇಕೆಂದೂ, ಅದಕ್ಕೆ ಕಾಲವಕಾಶವಿಲ್ಲದಿದ್ದರೆ ಕೊನೆಯ ಎರಡು ಪಾಶುರಗಳನ್ನಾದರೂ ಪಠಿಸಬೇಕೆಂದು ತಿಳಿಸುತ್ತಾರೆ. ಭಕ್ತಾದಿಗಳು ಅದಕ್ಕೂಸಹ ಕಾಲಾವಕಾಶವಿಲ್ಲವೆಂದು ತಿಳಿಸಲು, ಶ್ರೋತೃಗಳನ್ನು ಅವರ ಮುಂದೆ ನಮಸ್ಕರಿಸುವಂತೆ ವಿಜ್ಞಾಪಿಸಿಕೊಳ್ಳುತ್ತಾರೆ. ಕೆಲವರಿಗೆ ನಮಸ್ಕರಿಸಿ ಎಂದು ಕೇಳಿದುದು ಹಿತವೆನಿಸದೇ ಅಸಮಾಧಾನಕ್ಕೆ ಕಾರಣವಾಯಿತು. ಆಗ ಭಟ್ಟರು "ನಾನೇ ನಿಮಗೆ ನಮಸ್ಕರಿಸುವೆನು" ಎಂದು ಅಡ್ಡಬೀಳುವರು. ಇದನ್ನು ಕಂಡ ಭಕ್ತವೃಂದದವರು, ಅವರ ವಿನಯ ಮತ್ತು ತಾಳ್ಮೆಗೆ ಮನಸೋತು ಎಲ್ಲರೂ ಭಟ್ಟರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಇದನ್ನು ಕಂಡ ಭಟ್ಟರು, "ಶ್ರೋತೃವರ್ಗದವರೆಲ್ಲಾ ನನ್ನೆದುರಿನಲ್ಲಿ ನಮಸ್ಕರಿಸಿದ್ದಾರೆ, ಎಂದು ಶ್ರೀರಂಗನಾಥನಲ್ಲಿ ಮನವಿ ಮಾಡುತ್ತೇನೆ," ಎಂಬುದಾಗಿ ತಿಳಿಸಿದರಂತೆ. ಇಲ್ಲಿ ಭಟ್ಟರು ತಮ್ಮ ಶಿಷ್ಯರನ್ನು ಅನನ್ಯಾರ್ಹರನ್ನಾಗಿಸುವ ಸದಾಚಾರ್ಯರ ನಿಷ್ಠೆಯನ್ನು ಕಾಣಬಹುದು.

"ಆಚಾರ್ಯದೇವೋ ಭವ" ಎಂದೂ "ದೇವಮಿವ ಆಚಾರ್ಯ ಮುಪಾಸೀತ" ಎಂದೂ ಆಚಾರ್ಯರನ್ನು ಶ್ರುತಿ, ಸ್ಮೃತಿ, ಇತಿಹಾಸ ಪುರಾಣಾದಿಗಳು ಹೇಳಿವೆ. ನಮಗೆ ಭಗವತ್ಸಂಬಂಧವನ್ನು ಮಾಡಿಕೊಡುವವರು ಆಚಾರ್ಯರು ಶಮ, ದಮಾದಿಗಳಿಂದ ಕೂಡಿ, ಜ್ಞಾನಾನುಷ್ಠಾನಶೀಲರಾಗಿ, ಚೇತನರನ್ನು ಭಗವದಭಿಮುಖವಾಗಿಸಿ, ಭಗವನ್ಮಂಗಳಾಶಾಸನ ಮಾಡಲು ಯೋಗ್ಯರನ್ನಾಗಿ ಮಾಡುವರೇ ಆಚಾರ್ಯರು; ಎಂಬುದು ಇಲ್ಲಿನ ಫಲಿತಾರ್ಥ.

ಮಹಾಮಹಿಮರಾದ ಮಹರ್ಷಿಗಳಿಂದಲೂ ಆಳ್ವಾರ್ ಮೊದಲಾದ ಯೋಗಿಗಳಿಂದಲೂ, ರಾಮಾನುಜಾಚಾರ್ಯರೇ ಮುಂತಾದ ವಿಭೂತಿ ಪುರುಷರಿಂದಲೂ, ಭಗವಂತನ ಅರ್ಚಾವತಾರ ರೂಪವು ಕೊಂಡಾಡಲ್ಪಟ್ಟಿದೆ. ಅರ್ಚಾವತಾರವೇ ಭಗವದ್ದಯೆಯ ಘನೀಭೂತ ವೇಷ. ದಿವ್ಯಮಂಗಳ ವಿಗ್ರಹದ ಸೊಬಗಿನಿಂದ ಭಕ್ತರ ಹೃನ್ಮನಗಳನ್ನಾಕರ್ಷಿಸಿ, ಭಕ್ತಿಯ ಬುಗ್ಗೆಯನ್ನುಂಟು ಮಾಡುವ ಮಂಗಳಮೂರ್ತಿಯಿಂದ ಕೂಡಿ, ದಿವ್ಯದೇಶವೆಂದು ಪ್ರಸಿದ್ಧವಾದ ಶ್ರೀರಂಗದಲ್ಲಿ ನಾಲ್ಕುವೇದಗಳಿಂದಲೂ ಆವರಿಸಲ್ಪಟ್ಟು, ಪ್ರಣವಾಕಾರ ವಿಮಾನವನ್ನು ಹೊಂದಿ, ಆದಿಶೇಷನ ಮೇಲೆ ಪವಡಿಸಿರುವ ಶ್ರೀರಂಗನಾಥನ ಪುರೋಹಿತ ಕೈಂಕರ್ಯದ ಭಾಗ್ಯ ಪರಾಶರಭಟ್ಟರಿಗೆ ಒದಗಿತ್ತು. ಮಹಾಲಕ್ಷ್ಮಿ ಮತ್ತು ಶ್ರೀರಂಗನಾಥ ಇಬ್ಬರೂ ಅತ್ಯಂತ ವಾತ್ಸಲ್ಯಾತಿಶಯ ದಿಂದ ಆರಿಸಿದ ಭಕ್ತರಾಗಿ, ಅವರಿಗೆ ಸಾಕುಮಗನಾಗಿದ್ದರು. ಶ್ರೀರಂಗನಾಥನ ಪವಿತ್ರ ಕೈಂಕರ್ಯದ ಜೊತೆಗೆ, ರಾಮಾನುಜರು ಗೋವಿಂದಮುನಿ ಮತ್ತು ತಂದೆ ಕೂರೇಶರು ಇಂತಹ ಪವಿತ್ರಾತ್ಮರುಗಳ ಮಧ್ಯೆಬೆಳೆದ ವಾತಾವರಣವು ಭಟ್ಟರನ್ನು ದೈವೀಸಂಪತ್ತಿಗೆ ಅಧಿಪತಿಯನ್ನಾಗಿಸಿತ್ತು.

ಚೇತನನ ರಕ್ಷಣೆಯನ್ನು ಪರಮಾತ್ಮನೇ ಮುಂದಾಗಿ ಬಂದು ವಹಿಸಿಕೊಂಡರೆ, ಅದರ ಫಲಿತಾಂಶದಿಂದ ಜೀವನದ ಪ್ರತಿನಿಮಿಷವೂ ನಿರಂತರವಾದ ಪರಮಾನಂದವೇ ಪರಮಪದದಲ್ಲಿಯೂ ಮತ್ತು ಈ ಪ್ರಪಂಚದಲ್ಲಿಯೂ ಉಂಟಾಗುತ್ತದೆ.

ಭಟ್ಟರು 'ಅಷ್ಟಶ್ಲೋಕೀ' ಎಂಬ ಸ್ತೋತ್ರವನ್ನಲ್ಲದೆ, ಶ್ರೀರಂಗರಾಜಸ್ತವ, ಶ್ರೀಗುಣರತ್ನಕೋಶ, ಎಂಬ ಸ್ತೋತ್ರಗಳನ್ನೂ, ಸಹಸ್ರ ನಾಮ ಭಾಷ್ಯವಾದ 'ಭಗವದ್ಗುಣದರ್ಪಣ' ಎಂಬ ಗ್ರಂಥವನ್ನೂ ರಚಿಸಿದ್ದಾರೆ. ಇವರ ರಚನಾಸಾಮರ್ಥ್ಯವು ಅಮೂಲ್ಯವಾದುದಲ್ಲದೆ, ಸಂಸ್ಕೃತ ಸಾಹಿತ್ಯದ ಉತ್ತಮ ಭಾಗಗಳಾಗಿವೆ, ಪರಾಶರರ ಗ್ರಂಥಗಳು ಶ್ರೀವೈಷ್ಣವರನ್ನು ವಿಶೇಷ ಪ್ರಭಾವಿತರನ್ನಾಗಿ ಮಾಡಿರಬೇಕು, ಆದ್ದರಿಂದಲೇ ಎಲ್ಲಾ ಆಚಾರ್ಯರೂ ಇದನ್ನು ಅವಲಂಬಿಸಿದ್ದಾರೆ.

## ಅಷ್ಟಶ್ಲೋಕೀ

'ಅಷ್ಟಾನಾಂ ಶ್ಲೋಕಾನಾಂ ಸಮಾಹಾರಃ'– ಅಷ್ಟಶ್ಲೋಕಿ ಸ್ತೋತ್ರವು ಎಂಟು ಶ್ಲೋಕಗಳ ಗುಂಪು. ಎಂಟು ಶ್ಲೋಕಗಳಲ್ಲಿ ರಹಸ್ಯತ್ರಯವನ್ನು ಸ್ಪಷ್ಟವಾಗಿ ಪರಾಶರಭಟ್ಟರು ಸಂಸ್ಕೃತನುಡಿಯಲ್ಲಿ ನಿರೂಪಿಸಿರುತ್ತಾರೆ. ಮೊದಲು ನಾಲ್ಕು ಶ್ಲೋಕಗಳಲ್ಲಿ ಅಷ್ಟಾಕ್ಷರಿಯನ್ನೂ, ಮುಂದಿನ ಎರಡು ಶ್ಲೋಕಗಳಲ್ಲಿ ದ್ವಯಮಂತ್ರವನ್ನೂ ಮತ್ತು ಕಡೆಯ ಎರಡು ಶ್ಲೋಕಗಳಲ್ಲಿ ಚರಮ ಶ್ಲೋಕವನ್ನು ವಿವರಿಸಿದಾರೆ.

ಅಕಾರಾರ್ಥೋ ವಿಷ್ಣುಃ
ಜಗದುದಯ ರಕ್ಷಾ ಪ್ರಳಯಕೃತ್
ಮಕಾರಾರ್ಥೋ ಜೀವಃ
ತದುಪಕರಣಂ ವೈಷ್ಣವ ಮಿದಂ ।
ಉಕಾರೋ ಅನನ್ಯಾರ್ಹಂ
ನಿಯಮಯತಿ ಸಂಬಂಧ ಮನಯೋಃ
ತ್ರಯೀಸಾರಃ ತ್ರ್ಯಾತ್ಮಾ
ಪ್ರಣವ ಇಮ ಮರ್ಥಂ ಸಮದಿಶತ್ –॥

ಈ ಪ್ರಥಮ ಶ್ಲೋಕವು ವೇದದ ರೀತ್ಯಾ ಅ–ಕಾರ, ಮ–ಕಾರ ಮತ್ತು ಉ–ಕಾರಗಳ ಸಂಯೋಗದಿಂದ ಉಂಟಾಗಿರುವ ಪ್ರಣವದ ಅರ್ಥವನ್ನು ಮತ್ತು ಅಕ್ಷರಗಳಿಗಿರುವ ಸಂಬಂಧವನ್ನು ಸ್ಪಷ್ಟವಾಗಿ ತಿಳಿಸುತ್ತದೆ (ಪ್ರಣವಃ ಇಮ ಮರ್ಥಂ ಸಮದಿಶತ್)

ಪ್ರಣವದ ಮೂಲವೇ ಅ–ಕಾರ. "ಅ–ಕಾರೋ ವಿಷ್ಣು ವಾಚಕಃ", 'ಅಕ್ಷರಾಣಾಂ ಅಕಾರೋಽಸ್ಮಿ' ಇತ್ಯಾದಿ ಪ್ರಮಾಣಗಳಿಂದ ಸರ್ವರಕ್ಷಕನಾದ ವಿಷ್ಣುವೇ ಅ–ಕಾರದ ಅರ್ಥ ಎಂದು ತಿಳಿದು ಬರುತ್ತದೆ. ಪ್ರಸಿದ್ಧ ಪತಂಜಲಿ ವ್ಯಾಕರಣಕಾರರು ನಾರಾಯಣನಾಮವು ಮೊದಲ ಅ–ಕಾರವೆಂದು ತಿಳಿಸಿರುತ್ತಾರೆ. ವಿಷ್ಣು, ನಾರಾಯಣ ವಾಸುದೇವ ಇವುಗಳೆಲ್ಲವೂ ಆ ಪರಬ್ರಹ್ಮನನ್ನೇ ತಿಳಿಯಪಡಿಸುವ ನಾಮಗಳು. ಬ್ರಹ್ಮವಸ್ತುವನ್ನು ಬಿಟ್ಟು ಉಳಿದ ಯಾವುದೂ ಸ್ವತಂತ್ರವಾಗಿರಲಾರದು.

'ವಿಷ್ಣು' ಎಂಬ ಪದದ ಅರ್ಥ ಸರ್ವವ್ಯಾಪಿ. ಇದೇ ವಿಷ್ಣುವಿನ ಮೂಲಗುಣ. ವ್ಯಾಪಿಸುವ ವಸ್ತುಗಳ ಸೃಷ್ಟಿ, ರಕ್ಷಣೆ ಮತ್ತು ನಾಶಗಳಿಗೆ ಕಾರಣನೂ ಅವನೇ ಆಗಿರುವನು. (ಜಗದುದಯ ರಕ್ಷಾ ಪ್ರಳಯಕೃತ್) ಆ ಪರಮಾತ್ಮನು ವ್ಯಾಪಿಸಿರುವ ವಸ್ತುಗಳೇ ಈ ಪ್ರಕೃತಿಯ ಚಿದಚಿತ್‌ವಸ್ತುಗಳು. ಪರಮಾತ್ಮನಾಗಿ, ಅಂತರಾತ್ಮನಾಗಿ ಈಶ್ವರನು ವ್ಯಾಪಿಸದಿದ್ದಲ್ಲಿ, ಈ ಜಗತ್ತು ಪ್ರಾಣವಿಲ್ಲದ ಶರೀರದಂತೆ ನಿಸ್ತೇಜವಾಗಿರುತ್ತಿತ್ತು.

ಮ–ಕಾರವು ಇಪ್ಪತ್ತೈದನೆಯ ವ್ಯಂಜನವರ್ಣ. ಜ್ಞಾನವಾಚಿಯಾದ್ದರಿಂದ, ಜೀವಾತ್ಮನನ್ನು ಬೋಧಿಸುತ್ತದೆ 'ಮನ್ ಜ್ಞಾನೇ' ಅಂದರೆ ಮ–ಕಾರದ ವಸ್ತುವೇ ಜ್ಞಾನ, ಮ–ಕಾರ ಶಬ್ದದ ಮತ್ತೊಂದು ಅರ್ಥವು 'ಮನು ಅವಬೋಧನೇ' ಎಂಬುದವರಿಂದ ಸೂಚಿಸಲ್ಪಟ್ಟು, ಅದು ಜ್ಞಾನ, ಕ್ರಿಯಾ ಪ್ರವೃತ್ತಿ ಮತ್ತು ಇಚ್ಛಾಶಕ್ತಿಗೆ ಅಧಿಕಾರಿಯಾಗಿದೆ, ಹಾಗೂ ಜ್ಞಾನ ದ್ರವ್ಯವಾಗಿ ಜ್ಞಾನ ಗುಣಕವೂ ಆಗಿದೆ. ನಿರಂತರವೂ ಜ್ಞಾನಶೂನ್ಯವಾದ ಅಚಿತ್ ಸಂಬಂಧ ಪಡೆದ ಜ್ಞಾನಸ್ವರೂಪಿ ಜೀವನನ್ನು ಮ – ಕಾರವು ಉಲ್ಲೇಖಿಸುತ್ತದೆ ಮ–ಕಾರದ ಪರಿಮಾಣದ ಅರಿವಿಗೆ, 'ಮಸಿ ಪರಿಮಾಣೇ' ಎಂದು ತಿಳಿಸಲಾಗಿದೆ. ಅ–ಕಾರ

ದೊಂದಿಗೆ ಹೋಲಿಸಿದರೆ ಅದು ಅತಿಸೂಕ್ಷ್ಮವಾದ ಅಣುವಾಗಿದೆ

ಮ– ಕಾರವು ಪರಮಾತ್ಮನ ಉಪಕರಣವಾಗಿ, ವಿಷ್ಣುವಿನ ಸ್ವತ್ತು. ವಿಷ್ಣುವಿಗೇ ಸರಿ, ವಿಷ್ಣುವಿನ ಅನುಭೋಗವಾಗಿದೆ. (ತದುಪಕರಣಂ ವೈಷ್ಣವಂ ಇದಂ) ಜೀವನು 'ಇವಂ' ವರ್ಗಕ್ಕೆ ಸೇರಿದ್ದು ಪರಮಾತ್ಮಮನೊಂದಿಗೆ ಇರುವ ಸಂಬಂಧವನ್ನು ತಿಳಿಸಲಾಗಿದೆ. ಜೀವಾತ್ಮನು ಈಶ್ವರನಿಯಾಮ್ಯನು.

ಅನಾದಿಕಾಲದಿಂದಲೂ ಜೀವನು ಪ್ರಕೃತಿಯ ಅಚೇತನವನ್ನು ತನ್ನ ಸ್ವಂತಸ್ವತ್ತೆಂದು ತಪ್ಪಾಗಿ ಭಾವಿಸಿರುವನು ಅಚೇತನ ಪ್ರಪಂಚವೂ ಸಹ ಆ ಪರಮಾತ್ಮನಿಗೇ ಸೇರಿದೆ. ಜೀವನಿಗೆ ಅದರೊಂದಿಗೆ ತನ್ನ ಸುಖಭೋಗದ ಸಂಪರ್ಕ ಮಾತ್ರ ಸಾಧ್ಯ, ಎಂಬುದು ಸ್ಪಷ್ಟವಾಗಿದೆ. ಈಶಾವಾಸ್ಯ ಉಪನಿಷತ್ತಿನ ಮೊದಲ ಮಂತ್ರದಲ್ಲಿ ಈ ಅಭಿಪ್ರಾಯವು ತೋರುತ್ತದೆ.

ಈಶಾವಾಸ್ಯ ಮಿದಂ ಸರ್ವಂ
ಯತ್ಕಿಂ ಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾಃ
ಮಾ ಗೃಧಃ ಕಸ್ಯಸ್ವಿದ್ಧನಮ್ ॥

ಲೋಕದಲ್ಲಿರುವುದೆಲ್ಲವೂ ಈಶನಲ್ಲಿ ಅಡಗಿರುವದು. ಅವನನ್ನು ಬಿಟ್ಟು ಅಗಲಿರುವುದೆಂಬುದು ಯಾವುದೂ ಇಲ್ಲ. ವಸ್ತುಗಳ ಮೇಲೆ ಆಸೆಯನ್ನು ಬಿಟ್ಟು ಒಳ್ಳೆಯದನ್ನು ಪಡೆದುಕೊ. ಯಾವನ ವಸ್ತುವಿನ ಮೇಲೂ ಆಸೆಗೊಳ್ಳಬೇಡ, ಎಂಬುದೇ ಮುಖ್ಯಾಂಶ.

ಆದುದರಿಂದ ಅಹಂಕಾರ ಮಮಕಾರಗಳನ್ನು ತೊರೆದು, 'ದಾಸ' ಎಂಬ ಭಾವ ಪರಿಪಕ್ವವಾದಾಗಲೇ (ತದುಪಕರಣಂ) ಜೀವನ ಸ್ವಸ್ವರೂಪ ಅಭಿವ್ಯಕ್ತವಾಗುತ್ತದೆ. ಅಹಂ ಎನ್ನುವದಕ್ಕೆ ಎರಡು ಭಾವ. ಜ್ಞಾನ ದ್ರವ್ಯವಾಗಿ, ಅಚೇತನವಲ್ಲದ ವಸ್ತು. ಇದು ಜೀವಾತ್ಮನ ಸ್ವರೂಪ. ಎರಡನೆಯದಾಗಿ, ಈಶ್ವರನಂತೆ ಸ್ವತಂತ್ರವಾಗಿ ಅಚೇತನವಸ್ತುವನ್ನು ಬಳಸಬಲ್ಲ ಸಾಮರ್ಥ್ಯ. ಇದು ಸ್ವರೂಪ ವಿನಾಶಕವಾದ ಆತ್ಮಧರ್ಮ. ಇದರ ನಾಶವೇ ಮೋಕ್ಷದ ಉದ್ದೇಶ. ಇದರಿಂದ ಆತ್ಮನಿಗೆ ತಾಟಸ್ಥ್ಯ ಏರ್ಪಡುವುದಿಲ್ಲ ಚೇತನನ ಪಾರತಂತ್ರ್ಯ ಅಭಿಪ್ರಾಯವನ್ನು ಸೂಚಿಸಲು ಮಧುರಕವಿ ಆಳ್ವಾರರು ಜೀವನಿಗೆ 'ಅಡಿಯೇನ್' ಎಂಬ ಪದವನ್ನು ಉಪಯೋಗಿಸುತ್ತಾರೆ. ಜೀವಾತ್ಮ ಸ್ವತಂತ್ರನಲ್ಲ, ಈಶ್ವರನಿಗೇ ಸೇರಿದವನು ಎಂಬುದುದೇ ಸಹಜವಾದ ಸಂಬಂಧ

ಪ್ರಣವದಲ್ಲಿರುವ ಉ – ಕಾರವು, ಅ – ಕಾರ ಮತ್ತು ಮ-ಕಾರಗಳಿಗಿರುವ ಸಂಬಂಧವನ್ನು ನಿರ್ಣಯಿಸುತ್ತದೆ. ವಿಷ್ಣುವಿಗಲ್ಲದೆ ಅನ್ಯರಿಗೆ ಚೇತನನು ಸೇರಿಲ್ಲವಾದ್ದರಿಂದ, ಪರಮಾತ್ಮ ಜೀವಾತ್ಮಗಳಿಗಿರುವ ಸಂಬಂಧವು ಅನ್ಯಸಂಬಂಧವನ್ನು ನಿರಾಕರಿಸುತ್ತದೆ. (ಅನನ್ಯಾರ್ಹಂ) ಈ ವಿಧವಾದ ಸಂಬಂಧವೇ ನೈಜವಾದುದು. ಇದೇ ರೀತಿಯ ಸಂಬಂಧವೇ ಅ-ಕಾರ ಮತ್ತು ಮ-ಕಾರಗಳಿಗಿರುವುದು. ಚೇತನನು ವಿಷ್ಣು ಸಂಬಂಧವನ್ನು ಬಿಟ್ಟು ತನ್ನ ಬುದ್ಧಿ ಶಕ್ತಿಯಿಂದ ವಿಶೇಷ ಅಧಿಕಾರವನ್ನು ಅಪೇಕ್ಷಿಸಿ, ಇತರ ಸಂಬಂಧವನ್ನು ಬಯಸಿದರೆ, ಅದು ಬರಿಯ ಚಪಲದ್ದೇ ಆಗಿರುತ್ತದೆ. ಆದುದರಿಂದ ವಿಷ್ಣು ಸಂಬಂಧ ಒಂದನ್ನೇ ಒತ್ತಿ ಹೇಳಿದೆ (ನಿಯಮಯತಿ ಸಂಬಂಧಂ)

ಛಾಂದೋಗ್ಯ ಉಪನಿಷತ್ತಿನಲ್ಲಿ "ಸರ್ವಂ ಖಲು ಇದಂ ಬ್ರಹ್ಮ, ತಜ್ಜಲಾನ್ ಇತಿ ಶಾಂತ ಉಪಾಸೀತ" ಎಂಬುದರಿಂದ, ನಾವು ವಾಸಿಸುವ ಈ ಪ್ರಪಂಚದ ಆಗುಹೋಗುಗಳೆಲ್ಲವೂ ಸಹ ಅತ್ಯಂತ ಪ್ರಬಲವಾದ ಶಕ್ತಿಗೆ ಒಳಪಟ್ಟಿದೆ. ಆ ಶಕ್ತಿಯೇ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾಗಿದೆ ಎಂಬುದನ್ನು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಪ್ರತಿಪಾದಿಸಿದೆ ಆ ಶಕ್ತಿಯೇ ಆ ಸರ್ವಶಕ್ತನಾದ ಪರಬ್ರಹ್ಮ. ಈ ಪ್ರಾಪಂಚಿಕ ಕಲಸಗಳನ್ನು ನಿರ್ವಹಿಸಲು ಆ ಪರಬ್ರಹ್ಮನೇ ಚೇತನಾ ಚೇತನಗಳಿಗೆ ಆಧಾರನಾಗಿ, ನಿಯಾಮಕನಾಗಿ, ಶೇಷಿಯಾಗಿ, ಶರೀರಿಯಾಗಿದ್ದಾನೆ. ಆದುದರಿಂದ ಚೇತನನು ಅನಿತ್ಯವಸ್ತುವಿನ ಒಂದು ಅಂಗಮಾತ್ರವಾಗಿರುವನು ಅಂಗವನ್ನೇ ಪರಿಪೂರ್ಣವೆಂದು ಭಾವಿಸಲು ಅಸಾಧ್ಯ. ಆದುದರಿಂದ ಪ್ರಕೃತಿ

(23ನೇ ಪುಟ ನೋಡಿ)

# ನಿನ್ನ ಅನುಗ್ರಹವೆನ್ನ ಮೇಲಿರಲಿ

ಶ್ರೀನಿವಾಸನೆ ! ಗುಣಗಣಂಗಳ
ಶ್ರೇಣಿ ಎನಿಪನೆ ! ಭಕ್ತವತ್ಸಲ !
ಏನ ಹೇಳಲಿ ನಿನ್ನ ಮಹಿಮೆಯು ತಿಳಿಯಲಳವಲ್ಲ !
ಶ್ರೀನಿಧಿಯೆ ! ತೂಕಕ್ಕೆ ಸಿಗದಿಹೆ
ನೀನು , ಗಣನೆಗೆ ಮೀರಿದವನ್ಯೆ !
ಅನಳೆವೆನೆಂತಿನ್ನು ನಿನ್ನಯ ಮಹಿಮೆಗಳ ದೇವ ! ॥ ೧ ॥

ನಿರುಪಮನೆ ! ಸಜ್ಜನರ ನಿಕರಕೆ
ಪರಮ ಪಾವನಮೂರ್ತಿ ! ಭಕುತರ
ಪೊರೆವ ಕರುಣಾಸಿಂಧು ! ನಿನ್ನನು ಬಂದು ಮೊರೆಹೊಕ್ಕೆ !
ಶರಣಜನ ವತ್ಸಲನೆ ! ಪೊರೆ ನೀ
ನಿರುತ ನೆನ್ನುತ ಕರಯುಗಂಗಳ
ನಿರದೆ ಜೋಡಿಸಿ ಬೇಡುವೆನು ನಾ ನಿನ್ನ ಕಿಂಕರನು ॥ ೨ ॥

ಮತಿಯುತರು ಪೇಳುವರು ಜಗದೊಳು
ಶ್ರುತವು, ದೃಷ್ಟವು, ಅನುಭವವು, ಈ
ತ್ರಿತಯವಪ್ಪುದು ಜಗದಿ ದೃಢವನು ಕೊಡುವ ಅಂಶಗಳು ।
ಸತತ ನಿನ್ನನು ನೋಡಿ ಮಹಿಮಾ
ನ್ವಿತನೆ ನಿನ್ನನು ಬೇಡಿ, ನಲಿಯುವ
ರತುಲ ಭಕುತರು ಎನಿತು ಧನ್ಯರೊ ಕಂಡರಾರಿಹರು ! ॥ ೩ ॥

ನೋಡಿ ದಣಿಯರು ನಿನ್ನ ಗುಣಗಳ
ಹಾಡಿ ನಲಿವರು ಭಕುತ ಜನಂ
ನ್ನಾಡಿ ನಲಿವರು ನಿನ್ನ ಚರಿತೆಯ ನಿರುತ ವೆಂಕಟನೆ !
ಮಾಡಿ ದಣಿಯರು ನಿನ್ನ ಸೇವೆಯ
ನೀಡಿ ದಣಿಯರು ನಿನಗೆ ಸೊಮ್ಮನು,
ಬೇಡಿ ದಣಿಯರು ನಿನ್ನನುಗ್ರಹವೆನ್ನ ಮೇಲಿರಲಿ ॥ ೪ ॥

– ವಿದ್ವಾನ್ ಕೆ. ಸುಬ್ರಹ್ಮಣ್ಯ ಭಟ್ಟ

# ಬಾಗಿಲು ತೆರೆದಿದೆ

ಶ್ರೀ ವೈಕುಂಠದ ಬಾಗಿಲು ತೆರೆದಿದೆ ಯಾರಿಗೆ? ಯಾರು ಶ್ರೀ ಮನ್ನಾರಾಯಣನೇ ಪರತತ್ತ್ವವೆಂದು ದೃಢಪಡಿಸಿಕೊಂಡು, ಭಕ್ತಿ ಅಥವಾ ಪ್ರಪತ್ತಿ ಸಾಧನೆಯ ಪ್ರಯತ್ನದಿಂದ ಪರಮಾತ್ಮಾನುಗ್ರಹಕ್ಕೆ ಪಾತ್ರರಾಗಿ ಮೋಕ್ಷ ಪಡೆಯಬೇಕೆಂಬ ಉತ್ಕಟೇಚ್ಛೆಯಿಂದ ಪರಮಾತ್ಮನನ್ನು ಪ್ರಾರ್ಥಿಸುವರೋ ಅಂಥವರಿಗೆ ವೈಕುಂಠದ ಬಾಗಿಲು ಸದಾ ತೆರೆದಿದೆ ಇಲ್ಲಿ ಪರತತ್ತ್ವ, ಭಕ್ತಿ, ಪ್ರಪತ್ತಿ, ಮೋಕ್ಷ ಈ ಶಬ್ದಗಳ ಅರ್ಥವಿವರಣೆಯನ್ನು ಪೂರ್ವಾಚಾರ್ಯರ ಉಕ್ತಿಗಳನುಸಾರವಾಗಿ ವಿವರಿಸುವುದು ಈ ಲೇಖನದ ಉದ್ದೇಶವಾಗಿದೆ.

ಪರತತ್ವ – ಉಪನಿಷತ್ತಿನಲ್ಲಿ ವಿವರಿಸಿರುವ ಮೂಲತತ್ತ್ವಸ್ವರೂಪನಾದ ಪರಬ್ರಹ್ಮನೇ ಸರ್ವೇಶ್ವರನು. ಅವನೇ ಶ್ರೀ ಮನ್ನಾರಾಯಣನು. ಅವನನ್ನು "ಸತ್ಯಸ್ಯ ಸತ್ಯಂ" ಎಂದು ಹೇಳಲಾಗಿದೆ. ಅವನು ಪ್ರಕೃತಿ ಸ್ವರೂಪನು, ಸ್ವಯಂಪರಿಪೂರ್ಣನು, ಜ್ಞಾನಾನಂದ ಸ್ವರೂಪನು, ಅನಂತ ಕಲ್ಯಾಣಗುಣಪೂರ್ಣನು " ಸರ್ವೇಶ್ವರತ್ವಂ ವ್ಯಾಪಕತ್ವೇ ಸತಿ ಚೇತನತ್ವಂ, ಸರ್ವಶೇಷಿತ್ವಂ, ಸರ್ವ ಕರ್ಮ ಸಮಾರಾಧ್ಯತ್ವಂ, ಸರ್ವ ಕಾರ್ಯೋತ್ಪಾದಕತ್ವಂ, ಸ್ವಜ್ಞಾನ ಸ್ವೇತರ ಸಮಸ್ತದ್ರವ್ಯ ಶರೀರಕತ್ವಂ, ಸ್ವತಸ್ಸತ್ಯ ಸಂಕಲ್ಪಾಧಿಕಂ ಚೇಶ್ವರ ಲಕ್ಷಣಂ " ಎಂದು ನಿಗಮಾಂತ ಮಹಾದೇಶಿಕರು ನ್ಯಾಯ ಸಿದ್ಧಾಂಜನದಲ್ಲಿ ತಿಳಿಸಿದ್ದಾರೆ.

ಭಗವದ್ರಾಮಾನುಜರು " ಸ್ವಾಧೀನ ತ್ರಿವಿಧ ಚೇತನಾಚೇತನ ಸ್ವರೂಪಸ್ಥಿತಿ ಪ್ರವೃತ್ತಿ ಭೇದಂ" ಎಂದು ಪರಬ್ರಹ್ಮನನ್ನು ವರ್ಣಿಸಿದ್ದಾರೆ. " ಸತ್ಯಂ ಜ್ಞಾನಂ ಅನಂತಂ " ಎಂಬ ತೈತ್ತಿರೀಯ ಉಪನಿಷತ್ತಿನ ವಾಕ್ಯಕ್ಕೆ ಪರಮಾತ್ಮನೇ ಮೂಲ ಪ್ರಕೃತಿ ಎಂದು ವಿವರಿಸಿದ್ದಾರೆ, ರಾಮಾನುಜರು. ಅವರು ಪರಬ್ರಹ್ಮ ಪದವನ್ನು " ಭಿನ್ನ ಪ್ರವೃತ್ತಿ, ನಿಮಿತ್ತಾನಾಂ ಶಬ್ದಾನಾಂ ಏಕಸ್ಮಿನ್ನರ್ಥೇ ವೃತ್ತಿಃ, ಸಾಮಾನಾಧಿಕರಣ್ಯಂ " ಎಂದಿದ್ದಾರೆ "ಜನ್ಮಾದ್ಯಸ್ಯ ಯತಃ "ಎಂಬ ಸೂತ್ರದಲ್ಲಿ ಭಾಷ್ಯಕಾರರು ಪರಬ್ರಹ್ಮವನ್ನು ಸೃಷ್ಟಿ, ಲಯ ಮಾಡುವ ಚತುರ ಎಂದಿದ್ದಾರೆ. ಪರಮಾತ್ಮನು ವಿಭು, ಸರ್ವವ್ಯಾಪಿ. ತನ್ನನ್ನು ಬಿಟ್ಟು, ಸಕಲಪದಾರ್ಥಗಳ ಸಂಪರ್ಕ ಹೊಂದಿದ್ದಾನೆ. ಎಲ್ಲರಿಂದ ಎಲ್ಲಾ ಕಾರ್ಯಗಳಲ್ಲಿ ಆರಾಧಿಸಲ್ಪಡುವವನೆ ಪರಬ್ರಹ್ಮ. " ಅಹಂ ಚ ಸರ್ವ ಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ " ಎಂಬ ಗೀತಾವಾಕ್ಯದಂತೆ ಪರಬ್ರಹ್ಮನೇ ಸರ್ವಫಲಪ್ರದನು. ಪರಬ್ರಹ್ಮಸಂಕಲ್ಪವು ಎಲ್ಲರಿಗೂ ಅವರವರ ಕರ್ಮಾನುಸಾರ ಫಲ ಕೊಡತಕ್ಕದ್ದು. ಸಮಸ್ತಕ್ಕೂ ಅವನೇ ಆಧಾರನು. ಇಂತಹ ಪರಬ್ರಹ್ಮ ಸ್ವರೂಪನಾದ ಶ್ರೀಮನ್ನಾರಾಯಣನಿರುವ ವೈಕುಂಠದ ಬಾಗಿಲು ಸದಾ ತೆರೆದಿದೆ.

ಶ್ರೀಮನ್ನಾರಾಯಣನೇ ಪರತತ್ತ್ವ, ಎಂಬುದನ್ನು ದೃಢಪಡಿಸಲು ಪ್ರಶ್ನೋತ್ತರ ರೂಪವಾದ ಒಂದು ಶ್ಲೋಕವನ್ನು ಪೂರ್ವಾಚಾರ್ಯರು ಹೀಗೆ ತಿಳಿಸಿದ್ದಾರೆ

ಕಸ್ತ್ವಂ ತತ್ತ್ವ ವಿದಸ್ಮಿ ವಸ್ತು
ಪರಮಂ ಕಿಂ ತರ್ಹಿ ವಿಷ್ಣುಃ ಕಥಂ ।
ತತ್ತ್ವೇದಂ ಪರತೈತ್ತಿರೀಯಕ
ಮುಖ ತ್ರಯ್ಯಂತ ಸಂದರ್ಶನಾತ್ ॥

ಅನ್ಯಾಸ್ತರ್ಹಿಗಿರಃ ಕಥಂ
ಗುಣವಶಾದತ್ರಾಪಿ ರುದ್ರಃ ಕಥಂ !
ತದ್ವ್ಯಷ್ಟ್ಯಾಕಥ ಮುದ್ಭವತ್ಯವ
ತರತ್ಯನ್ಯತ್ಕಥಂನೀಯತಾ ॥

(ಕಸ್ತ್ವಂ) ನೀನು ಯಾರು ? (ತತ್ತ್ವ ವಿದಸ್ಮಿ) ತತ್ವವನ್ನು ತಿಳಿದವನು. (ವಸ್ತು ಪರಮಂ ತರ್ಹಿ) ಉತ್ಕೃಷ್ಟವಾದ ತತ್ತ್ವ ಯಾವುದು? ( ವಿಷ್ಣುಃ ) ವ್ಯಾಪಕತ್ತ್ವಗುಣ ವಿಶಿಷ್ಟನಾದ ಶ್ರೀಮನ್ನಾರಾಯಣನೇ ಉತ್ಕೃಷ್ಟ ತತ್ತ್ವ ( ಕಥಂ ) ಇದನ್ನು ನಿಷ್ಕರ್ಷೆಮಾಡುವ ಬಗೆ ಹೇಗೆ ? ( ತತ್ತ್ವೇದಂ ಪರತೈತ್ತಿರೀಯಕ ಮುಖತ್ರಯ್ಯಂತ ) ಕೇವಲ ತತ್ತ್ವನಿರ್ಣಯಕ್ಕಾಗಿಯೇ ಹೊರಟಿರುವ ನಾರಾಯಣನು, "ಸಹಸ್ರ ಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವ ಶಂಭುವಂ, ವಿಶ್ವಂ ನಾರಾಯಣಂ ದೇವ ಮಕ್ಷರಂ ಪರಮಂ ಪ್ರಭುಂ'' ಇತ್ಯಾದಿ ಮಂತ್ರಗಳಿಂದ ಸಕಲ ವಿದ್ಯಾಪ್ರಕರಣಗಳಲ್ಲಿ ಪ್ರತಿಪಾದ್ಯನಾಗಿರುವ ಪರಮ ಪುರುಷನನ್ನು ಆಯಾ ಶಬ್ದಗಳಿಂದ ಜ್ಞಾಪಕಪಡಿಸಿ ಅದರಲ್ಲಿ ಪುನಃ ಪುನಃ ನಾರಾಯಣತ್ವವನ್ನು ಅಭ್ಯಾಸರೂಪವಾಗಿ ಹೇಳಿರುವುದು. ಆದುದರಿಂದ ಪರವಿದ್ಯಾಪ್ರಕರಣದಲ್ಲಿ ಎಲ್ಲೆಲ್ಲಿ "ಪರಬ್ರಹ್ಮ, ಪರತತ್ತ್ವ, ಪರಂಜ್ಯೋತಿಃ ಪರಮಾತ್ಮಾ " ಎಂಬ ಶಬ್ದಗಳು ಪ್ರಯೋಗಿಸಲ್ಪಟ್ಟಿರುವುವೋ ಅಲ್ಲಲ್ಲಿ ನಾರಾಯಣನೇ ಪ್ರತಿಪಾದ್ಯನಾಗಿರುವನು ಎಂದು ನಿರ್ಧಾರವಾಗಿರುವುದು.

(ಅನ್ಯಾ ಸ್ತರ್ಹಿ ಗಿರಃ ಕಥಂ) ಶ್ರೀಮನ್ನಾರಾಯಣನೇ ಸರ್ವೋತ್ಕೃಷ್ಟವಾದ ವಸ್ತು ಎಂದು ನಿರ್ಣಯಿಸಿಬಿಟ್ಟರೆ "ಇಂದ್ರೋ ಮಾಯಾಭಿ ಪುರು ರೂಪ ಈಯತೇ ನ ಸನ್ನ ಚಾಸಚ್ಛಿವ ಏವ ಕೇವಲಃ" ಇತ್ಯಾದಿವಾಕ್ಯಗಳಿಂದ ಇಂದ್ರ ರುದ್ರಾದಿಗಳನ್ನು ತತ್ತ್ವವಾಗಿ ಉಪಯೋಗಿಸಿರುವ ವಾಕ್ಯಗಳ ಗತಿಯೇನು ? (ಗುಣವಶಾತ್) " ಇದಿ ಪರಮೈಶ್ವರ್ಯೆ" ಎಂಬ ಧಾತುವಿನಿಂದ ಹುಟ್ಟಿದ ಇಂದ್ರ ಶಬ್ದವೂ ಪರಮೈಶ್ವರ್ಯ ಗುಣವುಳ್ಳ ನಾರಾಯಣನನ್ನೇ ಹೇಳುವುದು. ಮಂಗಳತ್ವ ಗುಣ ಸೂಚಿಸುವ ಶಿವಶಬ್ದವೂ ನಾರಾಯಣನನ್ನೇ ಸೂಚಿಸುವದು ಈ ಅರ್ಥವನ್ನು ಅಂಗೀಕರಿಸಿದರೆ ಇಂದ್ರ ಶಿವಾದಿ ಪದಗಳನ್ನು ಹೊಂದಿರುವ ವಾಕ್ಯಗಳಿಗೆ ಯಾವ ಅನುಪಪತ್ತಿಯೂ ಇರುವುದಿಲ್ಲ (ಅತ್ರಾಪಿ ರುದ್ರಃ ಕಥಂ) ಶ್ರೀಮನ್ನಾರಾಯಣನೇ ಜಗತ್ಕಾರಣನು ಎಂದು ಹೇಳುವುದು ನ್ಯಾಯವಾಗಿದ್ದರೂ ಅಥರ್ವ ಶಿರಸ್ಸಿನಲ್ಲಿ "ಅಹಮೇವ ಪ್ರಥಮ ಮಾಸಂ ವರ್ತಾಮಿ ಚ ಭವಿಷ್ಯಾಮಿಚ" – ರುದ್ರನೇ ಜಗತ್ಕಾರಣನೆಂದು ನಿರ್ದೇಶ ಮಾಡಿಲ್ಲವೇ? ಇದು ಹೇಗೆ ಸಂಗತ? ( ತದ್ವ್ಯಷ್ಟ್ಯಾ) ರುದ್ರನು ತನ್ನ ಶರೀರದಲ್ಲಿ ಪಡೆದ ಅಂತರ್ಯಾಮಿ ಪರಮಾತ್ಮನನ್ನು ಅನುಸರಿಸಿ ಅಹಂ ಶಬ್ದ ಪ್ರಯೋಗವಿರುವುದರಿಂದ ಈ ವಾಕ್ಯಕ್ಕೆ ಅನುಪಪತ್ತಿ ಇಲ್ಲ. (ಕಥ ಮುದ್ಭವತಿ) "ಬ್ರಹ್ಮ ವಿಷ್ಣು ರುದ್ರೇಂದ್ರಾಸ್ತೆ ಸರ್ವೇ ಸಂಪ್ರಸೂಯಂತೇ" ಎಂಬ ವಾಕ್ಯಕ್ಕೆ ಬ್ರಹ್ಮರುದ್ರೇಂದ್ರರಿಗೆ ಸಮಾನವಾಗಿ ಇವರಿಗೂ ಉತ್ಪತ್ತಿ ಹೇಳುವುದು ಹೇಗೆ ಸಂಗತವಾದೀತು? ( ಅವತರತಿ ) ವಿಷ್ಣುವಿಗೆ ಇಲ್ಲಿ ಹೇಳಿರುವ ಉತ್ಪತ್ತಿ ಕರ್ಮವಶ್ಯವಾದ ಬ್ರಹ್ಮ, ರುದ್ರ, ಇಂದ್ರಾದಿಗಳ ಉತ್ಪತ್ತಿಯಂತೆ ಕರ್ಮಾಧೀನವಾಗಿ ಬಂದುದಲ್ಲ ಸುಖ ದುಃಖ ಭೋಗಕ್ಕಾಗಿ ಬಂದುದಲ್ಲ. ಲೋಕೋಜ್ಜೀವನಕ್ಕಾಗಿ ಮಾಡಿದ ಅವತಾರ ರೂಪವಾಗಿರುವುದು. ಆಪತ್ಕಾರಣ ತತ್ತ್ವವೆನಿಸಿಕೊಂಡ ಶ್ರೀಮನ್ನಾರಾಯಣನಿಗೆ ಉತ್ಪತ್ತಿ ದೋಷವಿಲ್ಲ (ಅನ್ಯತ್ಕಥಂ) ನಾರಾಯಣನೇ ತತ್ತ್ವ, ಅವನೇ ಜಗತ್ಕಾರಣ, ಅವನೇ ಪರಬ್ರಹ್ಮನೆನಿಸಿಕೊಂಡರೆ ಶ್ವೇತಾಶ್ವತರ ಉಪನಿಷನಲ್ಲಿ ಶಿವಮಹೇಶ್ವರಾದಿ

ಶ್ರೀ ಡಿ. ಕೃಷ್ಣ ಅಯ್ಯಂಗಾರ್

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನೆ | ಪ್ರಾ 8–00 | ಪ್ರಾ 8–30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | " | 40–00 |
| 3. | ಪುಳಿಯೋಗರೆ | " | 50–00 |
| 4. | ಪೊಂಗಲು | " | 55–00 |
| 5. | ಸಕ್ಕರಪೊಂಗಲ್ | " | 65–00 |
| 6. | ಶಾಕರ ಭಾತ್ | " | 85–00 |
| 7. | ಕೇಸರೀ ಭಾತ್ | " | 90–00 |
| 8. | ಸೀರ | " | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಶಬ್ದಗಳಿಂದ ಬ್ರಹ್ಮತ್ವ ಹೇಳಿರುವ ವಾಕ್ಯಗಳ ಗತಿಯೇನು? [ ನೀಯತಾಂ ] ಪುರುಷಸೂಕ್ತವನ್ನು ನೆನಪಿಗೆ ತರುವ ಅನೇಕ ಪದಗಳು ಇದೇ ಉಪನಿಷತ್ತಿನಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಅವುಗಳನ್ನು ಅನುಸರಿಸಿ ಶಿವಮಹೇಶ್ವರಾದಿ ಪದಗಳಿಗೆ ನಾರಾಯಣನಲ್ಲಿ ಪರ್ಯವಸಾನ ಹೇಳಿ ನಿರ್ವಹಿಸಬೇಕು. ಹೀಗೆ ಒಟ್ಟಿನಲ್ಲಿ ಶ್ರೀಮನ್ನಾರಾಯಣನೇ ಪರಮ ಕಾರಣನು, ಪರತತ್ತ್ವನು, ಪರಬ್ರಹ್ಮನು ಎಂದು ಹೇಳಬೇಕು. ಇಂಥಹ ಪರತತ್ತ್ವಸ್ವರೂಪನಾದ ಶ್ರೀ ಮನ್ನಾರಾಯಣನು ಬಿಜಯ ಮಾಡಿಸಿರುವ ವೈಕುಂಠದ ಬಾಗಿಲು ಸದಾ ತೆರೆದಿದೆ.

ಭಕ್ತಿ – ಬಾಗಿಲು ತೆರೆದಿರುವ ವೈಕುಂಠವನ್ನು ಪ್ರವೇಶಿಸುವುದಕ್ಕೆ ಭಕ್ತಿ ಹೇಗೆ ಸಾಧನ ಎಂಬುದನ್ನು ನೋಡೋಣ.

ಪರಮಾತ್ಮನಲ್ಲಿ ಉತ್ಕಟವಾದ ಪ್ರೀತಿ ಇಡುವುದೇ ಭಕ್ತಿ. ಇದನ್ನು ಉಪಾಸನ ಎಂದು ಕರೆಯಲಾಗಿದೆ. ಉಪಾಸನದ ಸ್ವರೂಪ ಹೇಗೆಂದರೆ– ಪರಮಾತ್ಮನು ಶುಭಾಶ್ರಯನು. ಸರ್ವವನ್ನೂ ಧರಿಸಿರುವವನು. ಸರ್ವವನ್ನೂ ಭರಿಸಿರುವನು. ಅವನು ಉಪಾಸ್ಯನು, ನಿಖಿಲಹೇಯಪ್ರತ್ಯನೀಕ ಗುಣಾಕರ ಸರ್ವಜ್ಞನು, ಸರ್ವಶಕ್ತನು, ಸತ್ಯ ಸಂಕಲ್ಪನು. ಶಂಖಚಕ್ರಗದಾಶಾರ್ಙ್ಗಾದಿ ದಿವ್ಯಭೂಷಣ ದಿವ್ಯಾಯುಧಗಳಿಂದ ಕೂಡಿದ ದಿವ್ಯ ಮಂಗಳ ವಿಗ್ರಹನೇ ಉಪಾಸ್ಯನು.

ಭಕ್ತನು ನಿಷ್ಕಾಮಕರ್ಮ ಮಾಡಿ ಫಲವನ್ನು ಪರಮಾತ್ಮನಿಗರ್ಪಿಸುವನು. ತಾನು ಪೂರ್ಣಪರತಂತ್ರನೆಂದು ತಿಳಿದು ಪರಮಾತ್ಮನು ತನ್ನ ತೃಪ್ತಿಗಾಗಿ ಎಲ್ಲವನ್ನೂ ತನ್ನ ಕೈಯಿಂದ ಮಾಡಿಸುವನೆಂದು ತಿಳಿಯುವನು. ತಾನು ಮಾಡುವುದೆಲ್ಲ ಪರಮಾತ್ಮ ಪ್ರೀತಿಗಾಗಿ, ಅವನ ಸೇವೆಗಾಗಿ ಎಂದು ಭಾವಿಸುವನು. ಪರಮಾತ್ಮನ ಪ್ರೀತಿಯುತ ಧ್ಯಾನ, ಸ್ಮರಣ, ಪೂಜನ, ಸಂಕೀರ್ತನದಲ್ಲಿ ತೊಡಗಿರುವುದರಿಂದ ಸ್ವಾಮಿಯನ್ನು ಅಗಲಿ ತಾನು ಇರಲಾರೆನೆಂಬ ಉತ್ಕಟೇಚ್ಛೆ ಉಂಟಾಗುವುದು. ಹೀಗೆ ಇವನ ಉತ್ಕಟಪ್ರೀತಿಯು ತೈಲಧಾರೆಯಂತೆ ಅವಿಚ್ಛಿನ್ನವಾಗಿ ನಡೆಯಬೇಕು. ವಿಚ್ಛಿತ್ತಿ ಉಂಟಾಗಬಾರದು. ಸ್ವಾಮಿಯ ದಿವ್ಯ ಚೇಷ್ಟಿತಗಳನ್ನು ಸದಾ ಸ್ಮರಿಸುತ್ತ ಪರಮಾತ್ಮನ ಮೇಲಿನ ಅವಲಿನಿಂದ ಭಕ್ತನು ಸದಾ ಕಾಲ ಕಳೆಯುವನು. ಇವೆಲ್ಲ ಭಕ್ತಿಯ ಲಕ್ಷಣಗಳು.

ಭಕ್ತಿನಿಷ್ಠನಿಗೆ ಎಲ್ಲವನ್ನು ಶಾಸ್ತ್ರ ನಿಯಮಾನುಸಾರವಾಗಿ ಆಚರಿಸುವ ಶಕ್ತಿ ಇರಬೇಕು. ಆತ್ಮದರ್ಶನಕ್ಕೆ ಅಗತ್ಯವಾದ ಕರ್ಮಯೋಗ, ಜ್ಞಾನಯೋಗಗಳು ಭಕ್ತಿಯೋಗಕ್ಕೆ ಸಾಧನವಾಗುವುವು. ಪರಮಾತ್ಮ ಸಾಕ್ಷಾತ್ಕಾರಕ್ಕೆ ಅಗತ್ಯವಾದ ಪ್ರಾರಬ್ಧ ದೋಷ ಕಳೆಯುವವರಗೂ ಭಕ್ತಿಯೋಗನಿಷ್ಠನು ವಿಲಕ್ಷಣವಾಗಿರುವನು. ಭಕ್ತಿಯೋಗವನ್ನು ಬಹುಕಾಲ ಒಂದೇ ಸಮನೆ ನಡೆಸುತ್ತಿರಬೇಕು ಅದು ಅಷ್ಟಾಂಗಯೋಗ ಯುಕ್ತವಾಗಿರಬೇಕು. ಇದರಲ್ಲಿ ಯಾವಾಗ ಮೋಕ್ಷ ದೊರೆಯುವದೆಂದು ಹೇಳುವದು ಕಷ್ಟ. ಪ್ರಾರಬ್ಧ ಕರ್ಮ ಕಳೆದ ಮೇಲೆ ಬಹುಕಾಲ ಹಿಡಿಯುವುದು. ಭಕ್ತಿಯೋಗದ ಪ್ರಾಬಲ್ಯದಿಂದ ಸಂಚಿತ, ಆಗಾಮಿ ಪಾಪರಾಶಿಯನ್ನು ಕಳೆಯಬಹುದು. ಪ್ರಾರಬ್ಧವನ್ನು ಅನುಭವಿಸಿಯೇ ತೀರಬೇಕು. ಭಕ್ತಿಯೋಗವು ಅನೇಕ ಪ್ರತಿಬಂಧಕಗಳಿಂದ ಕೂಡಿರುವುದು. ಬಹು ಕಾಲವಾಡಬೇಕು. ಶಕ್ತನಿಂದ ಮಾತ್ರ ಸಾಧ್ಯ. ದೀರ್ಘಕಾಲದ ಮೇಲೆ ಫಲಕಾರಿಯಾಗುವುದು. ಬಹು ಕಷ್ಟಸಾಧ್ಯವಾದುದು.

ಭಕ್ತ ಧ್ರುವನು ಭಕ್ತಿಯೋಗವಮಾಡಿ ಪರಮಾತ್ಮ ದರ್ಶನ ಪಡೆದನು. ಆಗ ಶ್ರೀ ಮನ್ನಾರಾಯಣನು "ಭಕ್ತ ರಾಜಕುಮಾರಾ! ನನ್ನ ದರ್ಶನವು ಎಂದಿಗೂ ವಿಫಲವಾಗುವುದಿಲ್ಲ. ನಿನ್ನ ಇಷ್ಟಾನುಸಾರ ವರವನ್ನು ಪ್ರಾರ್ಥಿಸು. ನನ್ನ ಕಟಾಕ್ಷವು ಒದಗಿತೆಂದರೆ ಮನುಷ್ಯನಿಗೆ ಸಮಸ್ತವೂ ಪ್ರಾಪ್ತವಾಗುವಾಗುತ್ತದೆ." ಎಂದು ಹೇಳುವನು.

ವರಂ ವರಯ ತಸ್ಮಾತ್ತ್ವಂ
ಯಥಾಭಿಮತ ಮಾತ್ಮನಃ ।
ಸರ್ವಂ ಸಂಪತ್ಸ್ಯತೇ ಪುಂಸಾಂ
ಮಯಿ ದೃಷ್ಟಿಪಥಂ ಗತೇ ॥

ಪ್ರಪತ್ತಿ :

ಭಕ್ತಿ ಉತ್ಪನ್ನವಾದನಂತರ ಅದರ ಉಪಾಸನೆಯಲ್ಲಿ ಚೇತನನು ತೊಡಗುವನು. ಇದೇ ಭಕ್ತಿಯೋಗ ಇದು ಮೋಕ್ಷಕ್ಕೆ ಸಾಧನ. ಇದನ್ನು ಬ್ರಹ್ಮ ವಿದ್ಯೆ ಎಂದು ಕರೆಯಲಾಗಿದೆ. ಹೀಗೆ ಮೋಕ್ಷಸಾಧನವಾದ ಬ್ರಹ್ಮವಿದ್ಯೆಗಳು ಮೂವತ್ತೆರಡು ಇವುಗಳನ್ನು ಆಚರಿಸುವವರು ಉಪಾಸಕರು. ಇವರಿಗೆಲ್ಲ ಮೋಕ್ಷದಲ್ಲಿ ಅಪೇಕ್ಷೆಯು ಸಮಾನ. ಫಲವು ಸಮಾನವಾಗಿದ್ದರೂ ಅಧಿಕಾರ, ಅನುಷ್ಠಾನದಲ್ಲಿ ವ್ಯತ್ಯಾಸವಿದೆ. ಒಬ್ಬೊಬ್ಬರಿಗೆ ಒಂದೊಂದು ವಿದ್ಯೆಯಲ್ಲಿ ಅಭಿರುಚಿ ಉಂಟಾಗುವುದು. ಇಂಥಹ ವಿದ್ಯೆಗಳಲ್ಲಿ ನ್ಯಾಸ ವಿದ್ಯೆಯೂ ಒಂದು. ಇದು ವೇದ ಪ್ರತಿಪಾದ್ಯವಾದುದು. ಇದನ್ನು ಪ್ರಪತ್ತಿ ಅಥವಾ ಶರಣಾಗತಿ ಎಂದು ಕರೆಯಲಾಗಿದೆ. ಪ್ರಪತ್ತಿಯು ಮೋಕ್ಷೋಪಾಯ ಎನ್ನುವದರಲ್ಲಿ ಸಂದೇಹವಿಲ್ಲ. ಇದನ್ನು ವೇದ, ಪುರಾಣ, ಇತಿಹಾಸ, ದಿವ್ಯಪ್ರಬಂಧಗಳಿಂದ ವಿಪುಲವಾಗಿ ದೃಢೀಕರಿಸಲಾಗಿದೆ.

ಪರಮಾತ್ಮನು ಪ್ರಾಪ್ಯ ಮತ್ತು ಪ್ರಾಪಕ. ಮುಮುಕ್ಷುವು ಪರಮಾತ್ಮನ ಪಾದಕಮಲಗಳಲ್ಲಿ ಪೂರ್ಣವಿಶ್ವಾಸದಿಂದ ಶರಣಾಗತಿ ಮಾಡಬೇಕು. ಮೋಕ್ಷ ಪ್ರಾಪ್ತಿಗಾಗಿ ಶರಣಾಗತಿ ಅಗತ್ಯವೆಂದು ಶ್ವೇತಾಶ್ವತರ ಉಪನಿಷತ್ತು ಸ್ಪಷ್ಟಪಡಿಸಿದೆ ಛಾಂದೋಗ್ಯ ಉಪನಿಷತ್ತು ಶರಣಾಗತಿ ಮಾಡಿದವನು "ಬ್ರಹ್ಮಸಂಸ್ಥ"ನಾಗುವನು ಎಂದು ತಿಳಿಸುತ್ತದೆ "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂಬುದು ರಾಮಾನುಜರ ಉಕ್ತಿ "ಮಾಮೇವ ಯೇ ಪ್ರಪದ್ಯಂತೇ", "ಮಾಂ ನಮಸ್ಕುರು", "ಮಾಮೇವೈಷ್ಯಸಿ" ಎಂಬ ಗೀತಾ ವಾಕ್ಯಗಳಲ್ಲಿ ಶರಣಾಗತಿ ಅಥವಾ ಪ್ರಪತ್ತಿ ಅಗತ್ಯ ಎಂದು ಉದಾಹರಿಸಲಾಗಿದೆ. ಹೀಗೆ ವೇದ ಕಾಲದಿಂದ ಹಿಡಿದು ಆಧುನಿಕ ಕಾಲದವರಗೆ ಪ್ರಪತ್ತಿ ವಿವರಣೆಯು ಬೆಳೆದು ಬಂದಿದೆ. ಪ್ರಪತ್ತಿ ಮಾಡಿದವನು ಪ್ರಪನ್ನನು. ಇವನಿಗೆ ವೈಕುಂಠದ ಬಾಗಿಲು ಸದಾ ತೆರೆದಿದೆ

ಪ್ರಪತ್ತಿಯು ಎಲ್ಲ ಸಾಧಕರಿಗೂ ಅಗತ್ಯ ಪರಮಾತ್ಮನಲ್ಲಿ ಶರಣಾಗತಿ ಮಾಡಬೇಕೆಂದು ಎಲ್ಲ ಮತಗಳೂ ತಿಳಿಸುತ್ತವೆ. "ನಾರಾಯಣ ಕರುಣಾಮಯ ಶರಣಂ ಕರವಾಣಿ ತಾವಕೌ ಚರಣೌ" ಎಂದು ಶಂಕರಭಗವತ್ಪಾದರು ಶರಣಾಗತಿ ಮಂತ್ರದ ಅರ್ಥವನ್ನು ತಿಳಿಸಿದರು. "ಶರಣಾಗತಿರೇವ ಸ್ಯಾತ್ ವಿಷ್ಣೋ ಮೋಕ್ಷಫಲಪ್ರದಾ" ಎಂದು ಶಕ್ತಿವಿಶಿಷ್ಟಾದ್ವೈತಿಗಳು ಷಟ್‌ಸ್ಥಳದ ಭಾಗವಾದ ಶರಣ ಸ್ಥಲದಲ್ಲಿ ಹೇಳಿದರು. "ಸರ್ವೇಷಾಂ ತು ಶಾಸ್ತ್ರಾಣಾಂ ಪರಮ ರಹಸ್ಯಂ ಈಶ್ವರ ಶರಣತಾ" ಎಂದು ಮಧುಸೂದನ ಸರಸ್ವತಿಗಳು ತಿಳಿಸಿದರು. "ಪ್ರಪನ್ನಾದನ್ಯೇಷಾಂ ನ ದಿಶತಿ ಮುಕುಂದೋ ನಿಜಪದಂ" ಎಂದು ವೇದಾಂತ ದೇಶಿಕರು ತಿಳಿಸಿದ್ದಾರೆ, ಮೋಕ್ಷಕ್ಕಾಗಿ ಶರಣಾಗತಿ ಮಾಡುವವರಿಗೆ ಅವರ ಜೀವಿತ ಕಾಲದಲ್ಲಿ ಪರಮಾತ್ಮನ ಧ್ಯಾನ, ಸ್ಮರಣೆ, ಪೂಜನ ದೊರೆಯುವುದಲ್ಲದೆ ದೇಹ ಬಿಟ್ಟ ತಕ್ಷಣ ವೈಕುಂಠದ ಬಾಗಿಲು ತೆರೆದು ಪ್ರವೇಶ ದೊರೆಯುವುದು. ಹೀಗೆ ಪ್ರಪತ್ತಿ ಫಲವು ಐಹಿಕ ಜೀವನದ ಮೇಲ್ಮೆಯನ್ನೂ ಸಹ ತಂದುಕೊಡುವುದು

ಪ್ರಪತ್ತಿಗೆ ಸರ್ವಾಧಿಕಾರವುಂಟು, "ಸರ್ವಸ್ಯ ಶರಣಂ ಸುಹೃತ್" ಸಮಸ್ತರಿಗೂ ಪರಮಾತ್ಮನೇ ಗತಿಯು ಮತ್ತು ಸ್ನೇಹಿತನು ಎಂದು ಶ್ವೇತಾಶ್ವತರದಲ್ಲಿ ತಿಳಿಸಲಾಗಿದೆ. "ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ" ಎಂದು ವಿಭೀಷಣನು ಶ್ರೀರಾಮನಲ್ಲಿ ಶರಣಾಗತಿ ಮಾಡಿದ್ದಾನೆ "ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೆ, ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" ಶ್ರೀರಾಮಚಂದ್ರನ ಶಪಥ ವಾಕ್ಯದಲ್ಲಿ "ಸರ್ವಭೂತೇಭ್ಯಃ" ಎಂಬ ಪದದಿಂದ "ಸರ್ವಸ್ಯ ಶರಣಂ ಸುಹೃತ್" ಎಂಬ ಶ್ರುತಿಯು ಉಪಬೃಹ್ಮಣ ಮಾಡಲ್ಪಟ್ಟಿದೆ ಹಾಗೆಯೇ ಅಹಿರ್ಬುಧ್ನ್ಯ ಸಂಹಿತೆಯಲ್ಲಿಯೂ ನಿರೂಪಿತವಾಗಿದೆ

"ಯದ್ಯೇನ ಕಾಮಕಾಮೇನ ನ ಸಾಧ್ಯಂ ಸಾಧನಾಂತರೈರ್ಮುಮುಕ್ಷುಣಾಂ ಯತ್ಸಾಂಖ್ಯೇನ ನ ಯೋಗೇನ ನ ಭಕ್ತಿತಃ"

ಚೇತನನು ಸಂಸಾರದಲ್ಲಿ ಬಹು ಕ್ಲೇಶವನ್ನು ಅನುಭವಿಸಿರುವನು, ಒಂದು ಸುಕೃತ ವ್ಯಾಜದಿಂದ ವಿಷ್ಣು ಕೃಪೆಯು ಇವನಿಗುಂಟಾಗುತ್ತದೆ. ಸ್ವಾಮಿಯನ್ನು ಆಶ್ರಯಿಸದೇ ಇರುವಾಗಲೇ ಅವನ ನಿರ್ಹೇತುಕ ಕೃಪೆಯು ಇವನಿಗೆ ಒಳ್ಳೆಯದನ್ನು ಮಾಡಿದೆ. ಮೊದಲು ಇವನಿಗೆ ಕರಣ, ಕಳೇಬರ ಕೊಟ್ಟಿತು, ಮಾನವಜನ್ಮ ಕೊಟ್ಟು ಸುಜ್ಞಾನ ವಿವೇಕಾದಿಗಳನ್ನು ಹೊಂದುವಂತೆ ಮಾಡಿತು. ಸಾಧುಜನಗಳು ಹುಟ್ಟಿ ಲೋಕವು ಪವಿತ್ರವಾಗುವ ಹಾಗೆ ಅಜ್ಞಾನಾಂಧಕಾರವನ್ನು ತೊಲಗಿಸಿತು. ಸಾಧುಗಳ, ಸಹೃದಯರ ಸತ್ಸಂಗ ದೊರೆಯುವಂತೆ ಮಾಡಿತು. ಇಷ್ಟೆಲ್ಲವೂ ನಿರ್ಹೇತುಕವಾಗಿ ದೊರೆತಿರುವಾಗ ಅವನಲ್ಲಿ ಶರಣಾಗತಿ ಮಾಡಿದರೆ ಕೃಪೆಮಾಡಿ ಮೋಕ್ಷ ಕೊಡದಿರುವನೇ? ಪ್ರಪನ್ನನಲ್ಲಿ ದೋಷವಿದ್ದರೂ ಅಲ್ಪದಂಡದಿಂದ ರಕ್ಷಿಸಿಯೇ ರಕ್ಷಿಸುವನು.

ಶರಣಾಗತನಾದ ಚೇತನನ್ನು ವಿಭೀಷಣನ ಹಾಗೆ ದೀನನಾಗಿಯೇ ಇರಲಿ, ಸಮುದ್ರರಾಜನಂತೆ ಅಹಂಕಾರಯುಕ್ತನಾಗಿಯೇ ಇರಲಿ, ಕಾಕಾಸುರನಂತೆ ಮಹಾಪರಾಧಿಯೇ ಆಗಿರಲಿ, ಸುಗ್ರೀವನ ಹಾಗೆ ಉದಾಸೀನನಾಗಿಯೇ ಇರಲಿ, ಯಾವಾಗ ಶರಣಾಗತನಾಗುವನೋ ಆಗ ಸ್ವಾಮಿಯು ರಕ್ಷಿಸಿಯೇ ತೀರುವವನು ಇಂತಹ ಕೃಪಾಪ್ರಭಾವವುಳ್ಳವನಾದುದರಿಂದಲೇ ಗಜೇಂದ್ರ ಮೋಕ್ಷದಲ್ಲಿ, ಪ್ರಹ್ಲಾದ ರಕ್ಷಣೆಯಲ್ಲಿ ದ್ರೌಪದೀ ಮಾನ ಸಂರಕ್ಷಣೆಯಲ್ಲಿ ಸ್ವಾಮಿಯು ಪಟ್ಟ ಶ್ರಮವನ್ನು ತಿಳಿಸಿದ್ದಾನೆ, ಹೀಗೆ ಪರಮಾತ್ಮನು ಚೇತನನಿಗೆ ಶೇಷಿಯಾಗಿ, ಆತ್ಮವಾಗಿ, ಪ್ರೇರಕವಾಗಿ, ಪ್ರಾಪ್ಯನಾಗಿ, ಸರ್ವವಿಧ ಬಂಧುವಾಗಿ, ರಕ್ಷಿಸುವ ಪ್ರಯಾಸ ವಹಿಸಿದವನಾಗಿರುವುದರಿಂದಲೇ ಶರಣಾಗತಿಯ ಮಹಾತ್ಮೆ ವ್ಯಕ್ತಪಟ್ಟಿದೆ. ಇಂತಹ ಪ್ರಪತ್ತಿಯನ್ನು ಪೂರ್ವಾಚಾರ್ಯರು ಪರಿಣಾಮ ಕಾರಿಯಾಗುವಂತೆ ಉಪದೇಶ ಮಾಡಿದ್ದಾರೆ.

ಗರ್ಭ ಜನ್ಮ ಜರಾ ಜ್ಞಾನ
ಮೃತ್ಯು ನಾರಕಜಂ ತಥಾ ।
ದುಃಖಂ ಸಹಸ್ರಶೋ ಭೇದೈ
ರ್ಭಿದ್ಯತೇ ಮುನಿಸತ್ತಮ ॥

ಯಾವಜ್ಜೀವತಿ ತಾವಚ್ಚ
ದುಃಖೈ ರ್ನಾನಾ ವಿಧೈರ್ಯುತಃ ।
ತಂ ತು ಕಾರಣಪಕ್ವೋ
ಘೋರಾಸ್ತೇ ಕಾರ್ಪಾಸ ಬೀಜವತ್ ॥

ಮಿತ್ರಭಾವೇನ ಸಂಪ್ರಾಪ್ತಂ
ನ ತ್ಯಜೇಯಂ ಕಥಂಚನ ।
ದೋಷೋ ಯದ್ಯಪಿ ತಸ್ಯ ಸ್ಯಾತ್
ಸತಾಮೇತ ದಗರ್ಹಿತಂ ॥

ಗೋವಿಂದೇತಿ ಯಥಾಕ್ರಂದತ್
ಕೃಷ್ಣಾ ಮಾದೂರವಾಸಿನಂ ।
ಋಣಂ ಪ್ರವೃದ್ಧಮಿವ
ಮಾಂ ಹೃದಯಾನ್ನಾಪಸರ್ಪತಿ ॥

ಶರಣಾಗತಿಯು ಜ್ಞಾನ ರೂಪವಾದ ವಿದ್ಯೆ. "ನ್ಯಾಸಃ ಪಂಚಾಂಗ ಸಂಯುತಃ," "ಷಡ್ವಿಧಾ ಶರಣಾಗತಿಃ" ಎಂದು ಶ್ವೇತಾಶ್ವತರ ಉಪನಿಷತ್ತು ಹೇಳಿದೆ.

ಆನುಕೂಲ್ಯಸ್ಯ ಸಂಕಲ್ಪಃ
ಪ್ರಾತಿಕೂಲ್ಯಸ್ಯ ವರ್ಜನಂ ।
ರಕ್ಷಿಷ್ಯತೀತಿ ವಿಶ್ವಾಸೋ
ಗೋಪ್ತೃತ್ವವರಣಂ ತಥಾ ॥
ಆತ್ಮನಿಕ್ಷೇಪ ಕಾರ್ಪಣ್ಯೇ
ಷಡ್ವಿಧಾ ಶರಣಾಗತಿಃ ॥

ಆನುಕೂಲ್ಯಸ್ಯ ಸಂಕಲ್ಪ ಎಂದರೆ ಪರಮಾತ್ಮನಿಗೆ ತಾನು ದಾಸನಾಗಿ ಪರತಂತ್ರನಾಗಿರುವುದರಿಂದ ಅವನ ಆಜ್ಞಾರೂಪ ಪ್ರವೃತ್ತಿಗಳಿಗೆ ಅನುಕೂಲನಾಗಿ ವರ್ತಿಸುವ ನಿರ್ಧಾರ. ಸ್ವಾಮಿಯ ಆಜ್ಞಾರೂಪ ನಿಷೇಧಗಳನ್ನು ತ್ಯಜಿಸುವುದು ಪ್ರಾತಿಕೂಲ್ಯವರ್ಜನ. ತನಗಿನ್ನಾವ ಉಪಾಯವೂ ಇಲ್ಲ, ಸ್ವಾಮಿಯೇ ತನಗೆ ಗತಿ ಎಂಬ ದೈನ್ಯವೇ ಕಾರ್ಪಣ್ಯ. ಶರಣಾಗತಿ ಮಾಡಿದರೆ ರಕ್ಷಿಸಿಯೇ ರಕ್ಷಿಸುವನು ಎಂಬ ಮಹಾನಂಬಿಕೆಯೇ ಮಹಾವಿಶ್ವಾಸ. ತನ್ನ ಇಷ್ಟವೇನೆಂಬುದನ್ನು ಪ್ರಾರ್ಥನೆಯ ಮೂಲಕ ಸಲ್ಲಿಸುವುದು ಗೋಪ್ತೃತ್ವವರಣ. ಈ ಐದು ಅಂಗಗಳ ಮೂಲಕ ಸ್ವಾಮಿಯ ಪಾದಾರವಿಂದಗಳಲ್ಲಿ ಆತ್ಮವನ್ನು ಅರ್ಪಿಸುವುದು ಆತ್ಮನಿಕ್ಷೇಪ.

ಭೋಗ್ಯಮುಕುಂದ !
ಗುಣಭೇದಮಚೇತನೇಷು ।
ಭೋಕ್ತೃತ್ವಮಾತ್ಮನಿ
ನಿವೇಶ್ಯ ನಿಜೇಚ್ಛಯೈವ ॥
ಪಾಂಚಾಲಿಕಾ ಶುಕ
ವಿಭೀಷಣಭೋಗದಾಯೀ ।

ಸಾಮ್ರಾಡಿ ವಾತ್ಮಸಮಯಾ
ಸಹ ಮೋದಸೇ ತ್ವಂ ॥

ಅಹಂ ಮದ್ರಕ್ಷಣಭರೋ
ಮದ್ರಕ್ಷಣಫಲಂ ತಥಾ ।
ನ ಮಮ ಶ್ರೀಪತೇರೇ ವಾತ್ಮಾನಂ
ನಿಕ್ಷಿಪೇ ದ್ಬುಧಃ ॥

ಸ್ವಾಮಿನ್ ಸ್ವಶೇಷಂ ಸ್ವವಶಂ
ಸ್ವಭರತ್ವೇನ ನಿರ್ಭರಂ ।
ಸ್ವದತ್ತ ಸ್ವಧಿಯಾಸ್ವಾರ್ಥಂ
ಸ್ವಸ್ಮಿನ್ನ್ಯಸ್ಯಸಿ ಮಾಂ ಸ್ವಯಂ ॥

ಜೀವಾತ್ಮನು ಪರಮಾತ್ಮನ ಸಂತೋಷಕ್ಕಾಗಿಯೇ ಇರುವನು. ಪರಮಾತ್ಮ ಸಾಕ್ಷಾತ್ಕಾರವೇ ಶರಣಾಗತಿಯ ಗುರಿ. ಇದೇ ಮೋಕ್ಷ ಜೀವಾತ್ಮನಿಗೆ ಸಂಬಂಧ ಪಟ್ಟುದೆಲ್ಲವೂ ಪರಮಾತ್ಮನಿಗೆ ಸೇರಿದ್ದು. ಶರಣಾಗತಿ ಅನುಷ್ಠಾನ ಕ್ರಮವನ್ನು ಸಂಕ್ಷೇಪವಾಗಿ ಹೀಗೆ ಒಟ್ಟು ಗೂಡಿಸಬಹುದು. "ಸರ್ವ ಲೋಕ ಶರಣ್ಯನಾದ ಸ್ವಾಮಿಯೇ! ಇನ್ನು ಮುಂದೆ ಜೀವಾತ್ಮನಾದ ನಾನು ನಿನಗೆ ಅನುಕೂಲವಾಗಿ ವರ್ತಿಸುವೆನು. ಪ್ರತಿಕೂಲಾಚರಣೆ ಮಾಡುವುದಿಲ್ಲ. ನೀನೊಬ್ಬನೇ ರಕ್ಷಕನು, ಇತರ್ರಾರೂ ಇಲ್ಲ ನೀನು ರಕ್ಷಿಸುವೆ ಎಂಬ ಸಂಪೂರ್ಣ ವಿಶ್ವಾಸವನ್ನು ನಿನ್ನಲ್ಲಿಟ್ಟಿರುವೆನು. ನಾನು ಮಹಾಪರಾಧಿ, ಆಕಿಂಚನನು ಅನನ್ಯಗತಿಕನು ನೀನೇ ರಕ್ಷಕನಾಗಿರಬೇಕು. ಈ ಆತ್ಮವು ನಿನ್ನದು. ಇದನ್ನು ರಕ್ಷಿಸುವ ಭಾರ ನಿನ್ನದು. ಉಪಾಸನಾದಿ ಸಾಧ್ಯೋಪಾಯದಲ್ಲಿ ಅಶಕ್ತನಾಗಿದ್ದೇನೆ. ಸರ್ವೇಶ್ವರನಾದ ನೀನೇ ಉಪಾಯಸ್ಥಾನದಲ್ಲಿ ನಿಂತು ಈ ಅನುಷ್ಠಾನವನ್ನು ಸಾಧಿಸಿಕೊಡು. ಇನ್ನು ಮುಂದೆ ನಾನು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ನೀನೇ ರಕ್ಷಿಸು ತತ್ಸ್ವತ್ವಾಧಿಕಾರವು ನಿನಗೇ ಸೇರಿದ್ದು, ಅದರ ಫಲವೂ ನಿನಗೆ ಸೇರಿದ್ದು."—ಎಂದು ಹೇಳಿ ಆಚಾರ್ಯರು ಉಪದೇಶಿಸಿದಂತೆ ಶರಣಾಗತಿ ಮಂತ್ರವನ್ನು ಉಚ್ಚರಿಸಿ ಶರಣಾಗತಿ ಮಾಡಬೇಕು.

ಪ್ರಾರಬ್ಧೇತರ ಪೂರ್ವ ಪಾಪಮಖಿಲಂ
ಪ್ರಾಮಾದಿಕಂ ಚೋತ್ತರಂ ।
ನ್ಯಾಸೇನ ಕ್ಷಪಯನ್ ಅನಭ್ಯುಪಗತ
ಪ್ರಾರಬ್ಧ ಖಂಡಂ ಚ ನಃ ॥
ಧೀಪೂರ್ವೋತ್ತರ ಪಾಪ್ಮನಾ ಮಜನನಾತ್
ಜ್ಞಾತೇಪಿ ತನ್ನಿಷ್ಕೃತೇಃ ।
ಕೌಟಿಲ್ಯೇ ಸತಿ ಶಿಕ್ಷಯಾಪನಯನ್
ಕ್ರೋಡೀಕರೋತಿ ಪ್ರಭುಃ ॥

ಪ್ರಪತ್ತಿಮಾಡಿದವನು ಪ್ರಪನ್ನನು. ಕೃತಕೃತ್ಯನು ಇವನ ಸರ್ವಪಾಪಗಳು ಪರಿಹಾರವಾಗಿ ಪರಿಶುದ್ಧನಾಗುವನು. ಒಂದು ಪಕ್ಷ ಪಾಪ ಸಂಭವಿಸಿದರೂ ಪರಮಾತ್ಮನು ಇವನಿಗೆ ಅಲ್ಪ ಶಿಕ್ಷೆ ಕೊಟ್ಟು ರಕ್ಷಿಸುವನು. ಪ್ರಪನ್ನನು, ಯಾವ ಸ್ಥಳದಲ್ಲಿ ಪರಮಾತ್ಮನ ಸೇವೆ, ಆರಾಧನ ಅರ್ಚನಾದಿಗಳು ನಡೆಯುವುವೋ ಎಲ್ಲಿ ತನಗೆ ಚಿತ್ತ ಸಮಾಧಾನ ದೊರೆಯುವುದೋ, ಎಲ್ಲಿ ಭಗವದ್ಭಾಗವತ ಕೈಂಕರ್ಯ ಪ್ರಾಪ್ತಿಯಾಗುವುದೋ ಅಂತಹ ಸ್ಥಳಗಳಲ್ಲಿ ವಾಸಿಸಬೇಕು.

ಶರಣಾಗತಿ ಅಥವಾ ಪ್ರಪತ್ತಿಯು ಒಂದು ಕ್ಷಣಕಾಲದ ಆಚರಣೆ. ಇದು ನಿರತಿಶಯ ಶಾಶ್ವತ ರೂಪ ಮೋಕ್ಷವನ್ನುಂಟು ಮಾಡುವುದೆಂದು ನಂಬುವುದು ಹೇಗೆ? ಇದು ಸಾಧ್ಯವೆ? ಇದು ಅತಿಶಯೋಕ್ತಿಯಲ್ಲವೇ? ಎಂದು ಕೇಳುವವರು ಇರಬಹುದು, ಅವರಿಗೆ ಹೀಗೆ ಉತ್ತರ ಹೇಳಬಹುದು.

ಬ್ರಹ್ಮಹತ್ಯಾದಿ ಪಾತಕಗಳು ಒಂದೇಕ್ಷಣದಲ್ಲಿ ಮಾಡ ತಕ್ಕವು. ಇದಕ್ಕೆ ಬಹುಕಾಲ ನರಕವನ್ನುಂಟು ಮಾಡುವ ಶಕ್ತಿ ಇದೆ ಎಂಬುದನ್ನು ಒಪ್ಪಿಕೊಂಡರೆ ಕ್ಷಣಕಾಲ ಆಚರಿಸಿದ ಶರಣಾಗತಿಗೆ ಶಾಶ್ವತ ಸುಖ ಕೊಡುವ ಶಕ್ತಿ ಇದೆ ಎಂದು ಒಪ್ಪಿ ಕೊಳ್ಳುವುದರಲ್ಲಿ ಅಭ್ಯಂತರವೇನೂ ಇಲ್ಲ. ಕ್ಷಣಕಾಲದ ಸುಕೃತಗಳಿಗೆ ವಿಶೇಷ ರೀತಿಯ ಶ್ರೇಯಸ್ಸನ್ನುಂಟು ಮಾಡುವ ಶಕ್ತಿ ಇದೆ ಎಂಬುದನ್ನು ಹೇಗೆ ಒಪ್ಪಿಕೊಳ್ಳಬಹುದೋ ಹಾಗೆಯೇ ಶರಣಾಗತಿಗೂ ಶ್ರೇಯಸ್ಸನ್ನುಂಟು ಮಾಡುವ ಶಕ್ತಿ ಇದೆ ಎಂದು ಒಪ್ಪಿ ಕೊಳ್ಳಬಹುದು. ಎಂತಹ ಪಾತಕಿಯನ್ನೂ ಶರಣಾಗತಿಯು ರಕ್ಷಿಸುವುದು ಎಂಬುದಕ್ಕೆ ಅನೇಕ ಪ್ರಮಾಣಗಳಿವೆ. ಹೀಗೆ ಶರಣಾಗತಿ ಮಾಡಿದ ಶರಣನಿಗೆ ವೈಕುಂಠದ ಬಾಗಿಲು ತೆರೆದಿರುವುದರಲ್ಲಿ ಸಂದೇಹವಿಲ್ಲ.

ಇನ್ನೂ ಕೊನೆಯದಾದ ಮೋಕ್ಷಸ್ವರೂಪವನ್ನು ವಿಶಿಷ್ಟಾದ್ವೈತ ದರ್ಶನ ರೀತಿಯಾಗಿ ಹೀಗೆ ಸಂಗ್ರಹಿಸಬಹುದು. ಅವಿದ್ಯಾಕರ್ಮವಾಸನಾದಿ ಸಕಲ ಪ್ರತಿಬಂಧಕ ನಿವೃತ್ತಿಪೂರ್ವಕವಾಗಿ ಅಪ್ರಾಕೃತ ದಿವ್ಯ ವೈಕುಂಠಲೋಕವನ್ನು ಸೇರಿ ಗುಣ ವಿಗ್ರಹ ವಿಭೂತಿ ವಿಶಿಷ್ಟನಾದ ಪರಬ್ರಹ್ಮಾನು ಭವ ಮತ್ತು ಕೈಂಕರ್ಯ ಪಡೆದ ನಿತ್ಯ ನಿರತಿಶಯಾನಂದವೇ ಮೋಕ್ಷ.

ಪ್ರಪನ್ನನಾದ ಚೇತನನು ದೇಹಾವಸಾನಾನಂತರ ಹೃದಯಾಂತಸ್ಥನಾಗಿದ್ದವನು, ಹೃದಯ ಗುಹೆಯಿಂದ ಬ್ರಹ್ಮರಂಧ್ರ ಸುಷುಮ್ನಾ ನಾಡಿಯ ಮೂಲಕ ದೇಹವನ್ನು ಬಿಟ್ಟು ನಿರ್ಗಮಿಸಿ ಸೂಕ್ಷ್ಮ ಶರೀರದಿಂದ ಕ್ರಮವಾಗಿ ಸೂರ್ಯಮಂಡಲವನ್ನು ಭೇದಿಸಿ ಮುಂದೆ ಹೊರಟು ಅರ್ಚಿರಾದಿ ಮಾರ್ಗದಲ್ಲಿ ಹೋಗುವನು. ಅಲ್ಲಲ್ಲಿ ಅತಿವಾಹಕರು ಇವನನ್ನು ಸತ್ಕರಿಸುವರು. ವೈಕುಂಠದ ಮಾರ್ಗವನ್ನು ತೋರಿಸುವರು. ಹೀಗೆ ಹೋಗುವಾಗ ಪ್ರಕೃತಿ ಮಂಡಲದ ಎಲ್ಲೆ ಮುಗಿದು ವಿರಜಾನದಿ ದೊರೆಯುವದು. ಅದರಲ್ಲಿ ಸ್ನಾನ ಮಾಡಿದ ತಕ್ಷಣ ತನ್ನ ಸೂಕ್ಷ್ಮ ಶರೀರವನ್ನು ಚೇತನನು ನೀಗಿಕೊಳ್ಳುವನು. ಇವನಿಗೆ ನಿತ್ಯ ಸೂರಿಗಳ ಕರಸ್ಪರ್ಶವಾಗುವದು. ಪರಮಾತ್ಮನ ಸಂಕಲ್ಪದಂತೆ ಇವನಿಗೆ ದಿವ್ಯದೇಹಪ್ರಾಪ್ತವಾಗುವುದು ಗುಣಾಷ್ಟಕಗಳು ಆವಿರ್ಭವಿಸುವುವು.

ಪರಮ ಕರುಣಾಳುವಾದ ಶ್ರೀಮನ್ನಾರಾಯಣನು ತನ್ನಲ್ಲಿ ಶರಣಾಗತರಾದವರನ್ನು "ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂ ಗತಿಂ" ಎಂಬಂತೆ ತಾನು ಅಭಯ ಕೊಟ್ಟಿರುವಂತೆ ತಾನೇ ಪ್ರಧಾನವಾಗಿ ಒಂದು ಎಲ್ಲೆಯಿಂದ ಇನ್ನೊಂದು ಎಲ್ಲೆಯವರಗೆ ದಾಟಿಸಿ, ತನ್ನ ದಿವ್ಯಧಾಮಕ್ಕೆ ಕರೆದೊಯ್ಯುವನು ಅಲ್ಲಿ ಚೇತನನು ಪರಮಾತ್ಮನಿಗೆ ಅನೇಕ ಪ್ರಣಾಮಗಳನ್ನು ಸಲ್ಲಿಸಿ ಸ್ವಾಮಿಯ ಅನಂತಕಲ್ಯಾಣಗುಣಗಳನ್ನು ಸ್ತೋತ್ರಮಾಡುತ್ತ, ನಿರತಿಶಯ ಆನಂದವನ್ನು ಪಡೆಯುವನು. ಕಾಲತತ್ತ್ವವಿರುವತನಕ ಮತ್ತೊಂದು ಹಿಂದಿರುಗಲಾಗದಂತಹ, ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಿಗೂ ಉಚಿತಕವೂ ನಿತ್ಯವೂ ನಿರವದ್ಯವೂ ನಿರತಿಶಯವೂ ಆದ ಕೈಂಕರ್ಯ ಸಾಮ್ರಾಜ್ಯದಲ್ಲಿ ಇರುವನು. ಇದೇ ಮೋಕ್ಷ ಇಂತಹ ಶಾಶ್ವತ ಆನಂದವನ್ನುಂಟು ಮಾಡುವ ವೈಕುಂಠದ ಬಾಗಿಲು ಸದಾ ತೆರೆದಿರುವುದು.

---

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

ಗೃಹಲಕ್ಷ್ಮಿ

# ವಿಜಯನಗರ ಹಾಗೂ ನಂತರದ ಕಾಲದ
# ಕರ್ನಾಟಕ ಕವಯಿತ್ರಿಯರು

ವಿಜಯನಗರದರಸರ ಕಾಲದಲ್ಲಿ ಸಾಹಿತ್ಯ ಸಂಸ್ಕೃತಿ ಕಲೆಗಳು ಪ್ರವರ್ಧಮಾನ ಸ್ಥಿತಿಗೆ ಬಂದವು. ವಿಜಯನಗರದರಸರು ಕವಿಗಳಿಗೆ, ಕಲಾಕಾರರಿಗೆ, ಆಶ್ರಯವನ್ನು ನೀಡುವ ಉದಾತ್ತ ದೊರೆಗಳಾಗಿದ್ದರು. ಈ ಕಾಲದಲ್ಲಿ ಅನೇಕ ಮಹಿಳೆಯರು ಅಪ್ರತಿಮ ಕವಯಿತ್ರಿಯರಾಗಿದ್ದರು. ಇವರಲ್ಲಿ ಮಹಾರಾಣಿಯರು ಇದ್ದರು. ಇವರ ಕೃತಿಗಳು ಸಂಸ್ಕೃತ ಭಾಷೆಯಲ್ಲಿರುವುದು ಆಯಾ ಕವಯಿತ್ರಿಯರ ಪಾಂಡಿತ್ಯವನ್ನು ತೋರಿಸುವಂತಹುದಾಗಿದೆ. ಸಂಸ್ಕೃತ ಸಾಹಿತ್ಯಕ್ಕೆ ಈ ಕವಯಿತ್ರಿಯರು ನೀಡಿರುವ ಕೊಡುಗೆ ಅವಿಸ್ಮರಣೀಯವಾದುದಾಗಿದೆ.

“ವೀರ ಕಂಪಣರಾಯ ಚರಿತ” ಎಂಬ ಕೃತಿಯನ್ನು ಗಂಗಾದೇವಿ ಎಂಬುವಳು ಬರೆದಿದ್ದಾಳೆ. ವೀರ ಕಂಪಣರಾಯ ಗಂಗಾದೇವಿಯ ಪತಿ. ಮಹಾರಾಜನಾದ ಕಂಪಣರಾಯನು ಮಧುರೆಯ ಸುಲ್ತಾನನನ್ನು ಸೋಲಿಸಿದ ವಿಷಯ ಈ ಕಾವ್ಯದಲ್ಲಿದೆ. ಮಧುರೆಯನ್ನು ರಾಜನು ಗೆದ್ದ ಕತೆಯಿರುವ ಕಾರಣದಿಂದ ಇದಕ್ಕೆ “ಮಧುರಾ ವಿಜಯ” ಎಂಬ ಹೆಸರೂ ಇದೆ. ಮಹಾಕವಿ ಕಾಳಿದಾಸನನ್ನು ಸ್ಮರಿಸಿರುವ ಕವಯಿತ್ರಿ ಅಷ್ಟಾದಶವರ್ಣನೆಗಳನ್ನೂ, ಪ್ರಾಚೀನ ಕಾವ್ಯಲಕ್ಷಣಗಳನ್ನೂ ತನ್ನ ಕೃತಿಯಲ್ಲಿ ಅಳವಡಿಸಿರುವುದು ಗಮನಿಸತಕ್ಕದ್ದಾಗಿದೆ.

ಇದೇ ಕಾಲದ ತುಕ್ಕಾದೇವಿಯೆಂಬ ಕವಯಿತ್ರಿ ‘ತುಕ್ಕಾಪಂಚಕಂ’ ರಚಿಸಿದ್ದಾಳೆ. ತುಕ್ಕಾದೇವಿಯ ಪಾಂಡಿತ್ಯ ‘ತುಕ್ಕಾಪಂಚಕಂ’ನ ಪದ್ಯಗಳಲ್ಲಿ ವ್ಯಕ್ತಗೊಂಡಿದೆ.

ಮಹಾರಾಜ ಅಚ್ಯುತರಾಯನ ರಾಣಿಯಾದ ತಿರುಮಲಾಂಬೆಯು ಸಂಸ್ಕೃತ ಭಾಷೆಯಲ್ಲಿ “ವರದಾಂಬಿಕಾ ಪರಿಣಯ” ವನ್ನು ಬರೆದಿದ್ದಾಳೆ. ‘ವರದಾಂಬಿಕಾ ಪರಿಣಯ’ ದೊರೆ ಅಚ್ಯುತರಾಯನು ವರದಾಂಬಿಕೆಯನ್ನು ವಿವಾಹವಾದ ಕಥೆಯನ್ನು ನಿರೂಪಿಸುತ್ತದೆ.

ಮೋಹನಾಂಗಿ ಎಂಬಾಕೆ ಬರೆದ “ಮಾರೀಚ ಪರಿಣಯ”, ಅಭಿನವ ಕಾಮಾಕ್ಷಿಯು ಬರೆದ ಇಪ್ಪತ್ತಕ್ಕೂ ಹೆಚ್ಚಿನ ಸರ್ಗಗಳನ್ನೊಳಗೊಂಡಿರುವ “ರಾಮಾಭ್ಯುದಯ” ಎಂಬ ಎರಡು ಸಂಸ್ಕೃತ ಭಾಷಾಕೃತಿಗಳನ್ನು ಇಲ್ಲಿ ಹೆಸರಿಸಬಹುದು. ಹಾಗೆಯೇ ತಂಜಾವೂರಿನ ರಘುನಾಥ ನಾಯಕನನ್ನು ಕುರಿತಂತೆ ರಾಮಭದ್ರಾಂಬೆ ಬರೆದ “ರಘುನಾಥಾಭ್ಯುದಯ” ಹಾಗೂ ಮಧುರವಾಣಿ ಎಂಬ ಕವಯಿತ್ರಿಯು ಆಂಧ್ರ ರಾಮಾಯಣವನ್ನು ಸಂಸ್ಕೃತ ಭಾಷೆಗೆ ಅನುವಾದಿಸಿರುವುದು ಗಮನಾರ್ಹವಾದ ವಿಷಯವಾಗಿದೆ. ತಂಜಾವೂರಿನ ನಾಯಕರು ವಿಜಯನಗರದರಸರ ಮಾಂಡಲೀಕರಾಗಿದ್ದರಿಂದ ಅವರ ಆಸ್ಥಾನದಲ್ಲಿದ್ದ ಈ ಕವಯಿತ್ರಿಯರ ಉಲ್ಲೇಖವನ್ನು ಇಲ್ಲಿ ಮಾಡಲಾಗಿದೆ.

ಸುಮಾರು ಹದಿನೇಳನೆಯ ಶತಮಾನದ ಆದಿಭಾಗದಲ್ಲಿರಬಹುದಾದ ಅವ್ವನವರ ಉಲ್ಲೇಖ ದಾಸಸಾಹಿತ್ಯದ ವಿವರವಾದ ಅಧ್ಯಯನ ಮಾಡಿದುದರಿಂದ ಕಂಡು ಬರುತ್ತದೆ. ಅನೇಕ ಜನ ಪಂಡಿತರನ್ನು ವಾದ ವಿವಾದದಲ್ಲಿ ಸೋಲಿಸಿದ ಅವ್ವನವರು ಅನೇಕ ಶಿಷ್ಯರನ್ನು ಪಡೆದಿದ್ದರು. ಮಹಾ ಪಂಡಿತೆಯಾದ ಈಕೆ ಅನೇಕ ಪದಗಳನ್ನೂ, ಕೀರ್ತನೆಗಳನ್ನೂ ರಚಿಸಿದ್ದಾರೆ. ಸಂಸ್ಕೃತ ಭಾಷೆಯಲ್ಲಿ ಅವ್ವನವರು ಅಪಾರವಾದ ಪಾಂಡಿತ್ಯವನ್ನು ಪಡೆದಿದ್ದರಂತೆ. ಭಾರತ, ಭಾಗವತಗಳ ತಿರುಳನ್ನೆಲ್ಲಾ ತಿಳಿದಿದ್ದರಿಂದ ಮೇಲೆ ಅವರ ಪಾಂಡಿತ್ಯದ ಹಿರಿಮೆಯ ಅರಿವಾಗುತ್ತದೆ. ಅನೇಕ ದೇವರ ನಾಮ ಕೀರ್ತನೆ, ಜೋಗುಳದ ಹಾಡುಗಳನ್ನು ಇವರು ರಚಿಸಿರಬಹುದೆಂದು ಹೇಳಬಹುದು.

“ಚಂದನಾಂಬಿಕೆಯ ಕಥೆ” ಯನ್ನು ತ್ರಿಪದಿ ಛಂದಸ್ಸಿನಲ್ಲಿ, ಅಜ್ಞಾತ ಕವಯಿತ್ರಿಯೊಬ್ಬಳು ಬರೆದಿದ್ದಾಳೆ. ಚಂದನೆಯ ಕಥೆ ಹಾಗೆ ನೋಡಿದರೆ ಬಹಳ ಪ್ರಾಚೀನ ಕಾಲದಿಂದಲೂ ಜೈನ ಗ್ರಂಥಗಳಲ್ಲಿ ಇದೆ. ಚಾಮುಂಡರಾಯನ “ಚಾಮುಂಡರಾಯ ಪುರಾಣ”, ಎರಡನೇ ನಾಗವರ್ಮನ “ವರ್ಧಮಾನ ಪುರಾಣ”, ಆಚಣ್ಣನ “ವರ್ಧಮಾನ ಪುರಾಣ”, ಪದ್ಮಕವಿಯ “ವರ್ಧಮಾನ ಚರಿತೆ” ಇವುಗಳಲ್ಲೆಲ್ಲಾ ಚಂದನೆಯ ಕಥೆ ಬರುತ್ತದೆ.

ಜೈನ ಧರ್ಮೀಯರಿಗೆ ಯಶೋಧರ ಮಹಾರಾಜನ ಕಥೆ ಪ್ರಿಯವಾಗಿರುವಂತೆ ಚಂದನಾಂಬಿಕೆಯ ಕಥೆಯೂ ಪ್ರಿಯವಾಗಿದೆ. ಚೇಟಕ ಮಹಾರಾಜನ ಕುಮಾರಿಯಾದ ಚಂದನಾಂಬಿಕೆಯ ಕಥೆಯನ್ನು ಕವಯಿತ್ರಿ ನಾಲ್ಕುನೂರಕ್ಕೂ ಹೆಚ್ಚಿನ ಪದ್ಯಗಳಲ್ಲಿ ಸೊಗಸಾಗಿ ನಿರೂಪಿಸಿದ್ದಾಳೆ. ವರ್ಧ



ಮಾನ ಮಹಾವೀರರ ಕಥೆಯೊಡನೆ ಚಂದನೆಯ ಕಥೆಯೂ ಬರುತ್ತದೆ. ಈ ಅಜ್ಞಾತ ಕವಯಿತ್ರಿಯ ಭಾಷೆ, ಶೈಲಿ, ವರ್ಣನೆ, ಕಥಾವಸ್ತುವಿನ ನಿರೂಪಣೆ ಇವು, ಹೃದಯಂಗಮವಾಗಿ ಮೂಡಿಬಂದಿವೆ. ಆ ಕಾಲಕ್ಕೆ ಪ್ರಸಿದ್ಧವಾದ ಕಥೆಗಳೆಲ್ಲವನ್ನೂ ಅರಿತಿದ್ದ ಈ ಅಜ್ಞಾತ ಕವಯಿತ್ರಿ ಚಂದನೆಯ ಕಥೆಯನ್ನು ಹೆಂಗಳೆಯರ ಮನಸ್ಸಂತೋಷಾರ್ಥವಾಗಿಯೂ ಜೊತೆಗೆ ಪುಣ್ಯ ಸಂಪಾದನೆಯ ದೃಷ್ಟಿಯಿಂದಲೂ ಹೇಳಿದಳಂತೆ !

ಚಂದನ ದೇವಿಯ ಚಂದದ ಗುಣಗಳ
ಪೊಂದನೆಣಿಸದೆ ಹರದನ ಹೆಂಡತಿ
ನಿಂದೆಗೆ ತಂದೆಳೆಸಿದಳೆ ||

ಚಂದದ ಚಂದಿರ ಕುಂದಣವಾರಾರು
ನಿಂದಿಸಿ ನಿಜವ ಬಿಡದಂತೆ ಚಂದನೆ
ನೊಂದರೆ ಗುಣವ ಬಿಡುವಳೆ ||

ಅಂಜೆನು ಸಿಂಹಕ್ಕೆ ಅಂಜೆನು ಮಾತಂಗಕ್ಕೆ
ಅಂಜೆ ಅಂಜಿಸುವ ಸಿಡಿಲಿಗೆ ಕೆಳೆಯಳೆ
ಅಂಜುವೆ ಪರರ ನಿಂದೆಗೆ||

ಇವೇ ಮುಂತಾದ ಉತ್ತಮವಾದ ಅನೇಕ ತ್ರಿಪದಿಗಳು ಚಂದನೆಯ ಕಥೆಯಲ್ಲಿವೆ. “ಕರ್ಮವ ಕೆಡಿಸುವ ನಿರ್ಮಳವೆನಿಸುವ ಶರ್ಮದ ಸಿರಿಯ

ಶ್ರೀ ಕೆ. ರಮಾನಂದ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

  ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯಲ್ಲಿ ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ; ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಬಯಸುವ ಭವ್ಯರು ಧರ್ಮವನೊಮ್ಮೆ ಮರೆಯರು" ಎಂಬಂತಹ ಪದ್ಯಗಳೂ ಇಲ್ಲುಂಟು. ಚಂದನೆಯ ಕಥೆಯು ಮತಿಯನ್ನು ಬೆಳಗಿಸುವುದಂತೆ! ಅಜ್ಞಾತ ಕವಯಿತ್ರಿಯ "ಚಂದನಾಂಬಿಕೆಯ ಕಥೆ" ಎಂಬ ಈ ಕೃತಿ ಪ್ರಾಚೀನ ಕಾಲದ ಅನೇಕ ವಿವರಗಳನ್ನು ಬಿಚ್ಚಿಕೊಡುತ್ತದೆ.

ಹರಪನ ಹಳ್ಳಿಯವಳಾದ ಭೀಮವ್ವ "ಭೀಮೇಶ ಕೃಷ್ಣ" ಎಂಬ ಅಂಕಿತನಾಮದಿಂದ ಹಾಡುಗಳನ್ನು ರಚಿಸಿರಬಹುದೆಂದು ಕೆಲವರು ವಿದ್ವಾಂಸರು ಹೇಳುತ್ತಾರೆ. ಚಂದ್ರಹಾಸ, ಶಕುಂತಲೆ, ಸುದಾಮ, ನಳ, ಸುಭದ್ರೆ ಇವರ ಕಥೆಗಳನ್ನಾಧರಿಸಿ ಹಾಡುಗಳನ್ನು ರಚಿಸಿರಬಹುದಾದ ಭೀಮವ್ವ ಶುಕ್ರವಾರದ ಹಾಡು, ಶನಿವಾರದ ಹಾಡು, ವಾಲಿ ಬರೆದ ಹಾಡು ಮುಂತಾದ ಹಾಡುಗಳನ್ನು ಬರೆದಿದ್ದಾಳಂತೆ! ಭೀಮವ್ವನ ಹಾಡುಗಳೆಲ್ಲವೂ ಸಮಗ್ರವಾಗಿ ದೊರೆತಾಗ ಮಾತ್ರ ಅವುಗಳ ಕಾವ್ಯ ಗುಣದ ಬಗೆಗೆ ಚರ್ಚಿಸಬಹುದು. ಒಟ್ಟಾರೆಯಾಗಿ ಹೆಚ್ಚು ಹಾಡುಗಳನ್ನು ರಚಿಸಿದ ಕೀರ್ತಿಗೆ ಭೀಮವ್ವ ಪಾತ್ರಳಾಗಿದ್ದಾಳೆನ್ನಬಹುದು.

ಹೆಳವನ ಕಟ್ಟೆಯವಳಾದ ಗಿರಿಯಮ್ಮ ಪ್ರಸಿದ್ಧಳಾದ ಕವಯಿತ್ರಿಯಾಗಿದ್ದಾಳೆ. ಪ್ರಾಚೀನ ಕವಯಿತ್ರಿಯರಲ್ಲಿ ಹೆಳವನಕಟ್ಟೆ ಗಿರಿಯಮ್ಮನ ಸ್ಥಾನವು ಪ್ರಧಾನವಾದುದಾಗಿದೆ. ಹೆಳವನಕಟ್ಟೆ ಗಿರಿಯಮ್ಮನ 'ಚಂದ್ರಹಾಸ ಚರಿತ್ರೆ', 'ಕಾಳಿಯ ಮರ್ದನ', 'ಉದ್ದಾಲಕನ ಕಥೆ'-ಕೃತಿಗಳು ಮೌಲ್ಯವುಳ್ಳಂತಹುವಾಗಿವೆ ರಾಣಿಬೆನ್ನೂರು ಗಿರಿಯಮ್ಮನ ಜನ್ಮಸ್ಥಳ. ತಿಪ್ಪರಸ ಗಿರಿಯಮ್ಮನ ಪತಿ. ಹೆಳನವ ಕಟ್ಟೆಯ ರಂಗನಾಥಸ್ವಾಮಿಯನ್ನು ತನ್ನ ಆರಾಧ್ಯ ದೈವವನ್ನಾಗಿ ಮಾಡಿಕೊಂಡಿದ್ದವಳು ಗಿರಿಯಮ್ಮ. ಗಿರಿಯಮ್ಮನು ಅನೇಕ ಪವಾಡಗಳನ್ನು ಮೆರಸಿದಳೆಂಬ ಸಂಗತಿಯೂ ಗಮನಿಸತಕ್ಕದ್ದೇ ಆಗಿದೆ. 'ಸೀತಾ ಸ್ವಯಂವರ' ಕೃತಿಯೂ ಗಿರಿಯಮ್ಮನದೇ ಇರಬೇಕೆನ್ನಲಾಗಿದೆ. "ಪೃಥ್ವೀ ಆಕಾಶ ಸೂರ್ಯ ಚಂದ್ರರಿಗೆರಗುವೆ" ಎಂದು 'ಚಂದ್ರಹಾಸ ಚರಿತ' ದಲ್ಲಿ ಹೇಳಿಕೊಂಡಿರುವ ಗಿರಿಯಮ್ಮನು ಭಗವಂತನನ್ನು ವಿಧವಿಧವಾಗಿ ಪ್ರಶಂಸಿಸಿದ್ದಾಳೆ.

"ರಂಗ ಶ್ರೀ ರಘುನಂದನ ಮದನ ಕೋಟಿ ಮೋಹನಾಂಗಾ। ಮಾಧವ ಪುಣ್ಯಚರಿತ ಕರುಣಾಪಾಂಗಾ, ಹೆಳವನಕಟ್ಟೆ ನಿಲಯ ವೆಂಕಟ ಶ್ರೀ ರಂಗಾ॥", "ನಿನ್ನ ನಂಬಿದವರ ಕಾಯೋ ನಿಜವುಳ್ಳ ದೇವಾ ಎನ್ನನು ಉದ್ಧರಿಸಿ ಕಾಯೋ ಶ್ರೀ ವೆಂಕಟರಾಯಾ ॥" ಎಂಬಲ್ಲಿ ಆರ್ತಿಯೊಬ್ಬಳ ಹೃದಯ ನಿನಾದವಿರುವುದು ಗೋಚರಿಸುತ್ತದೆ. 'ಹೊನ್ನ ತಾ ಗುಬ್ಬಿ...'ಮಳೆಯ ದಯಮಾಡೋ ರಂಗ...' 'ಸುರಪುರ ನಿವಾಸ ಲಕ್ಷ್ಮಿಯ ಕಾಂತ ಭಜಕರ್ಗೆ'... ಎಂದಾರಂಭವಾಗುವ ಪದ್ಯಗಳೂ ಅರ್ಥಗರ್ಭಿತವಾಗಿವೆ.

ಕವಯಿತ್ರಿಯ ವಿನಯ ಈ ಪದ್ಯದಲ್ಲಿ ಚನ್ನಾಗಿ ವ್ಯಕ್ತವಾಗಿದೆ.

ಅರಿಯೆನು ಈ ಕವಿತಾ
ಚಾತುರ್ಯದ ಮಹಿಮೆಯ ।
ಗುರುವಿನ ಮುಖದಲಿ ಕೇಳಲಿಲ್ಲಾ ಪರಮ
ದಯಾಳು ಹೆಳವನ ಕಟ್ಟೆ ರಂಗಯ್ಯಾ।
ವರವಿತ್ತು ಸಲಹಿದನನು ದಿನವು ಹೆಚ್ಚಾಗಿ
ಅರಿಯನು ಹೆಣ್ಣು ಬಾಲೆಯು ನಾನು ।
ಅಚ್ಚ ಚಾತುರ್ಯದ ಪದನ ನೆಚ್ಚಿ ನಿನ್ನನು
ಹೆಳವನ ಕಟ್ಟೆ ರಂಗಯ್ಯಾ।
ಉಚ್ಚರಿಸಿದೆ ಕ್ಷಮಿಸುವುದು. ॥

ಹೆಳವನಕಟ್ಟೆ ಗಿರಿಯಮ್ಮನ ಕವಿತಾಶಕ್ತಿ, ಸರಳ ಭಾಷಾ ಶೈಲಿ, ಗೀತಕಾವ್ಯ ಗುಣ ಇವುಗಳು ಮೆಚ್ಚತಕ್ಕವಾಗಿವೆ.

ಮೈಸೂರು ಒಡೆಯರು ವಿಜಯ ನಗರದರಸರ ನಂತರ ಕಲೆ ಸಾಹಿತ್ಯಗಳಿಗೆ ಆಶ್ರಯ ನೀಡಿದ ಮಹಾನುಭಾವರಾಗಿದ್ದರು ಅನೇಕ ಜನ ಕವಿಗಳು, ಶಾಸನ ಕವಿಗಳು, ವಿದ್ವಾಂಸರು ಈ ಒಡೆಯರುಗಳ ಆಶ್ರಯದಿಂದ ಪ್ರಕಾಶಕ್ಕೆ ಬಂದರು. ಅಮರವಾದ ಕೃತಿಗಳನ್ನೂ, ಶಾಸನಗಳನ್ನೂ ಇವರು ರಚಿಸಿದರು.

ಮೈಸೂರು ಒಡೆಯರ ಚರಿತ್ರೆಯನ್ನು ಗಮನಿಸಿದಾಗ ಸಂಚಿಯ ಹೊನ್ನಮ್ಮ ಹಾಗೂ ಶೃಂಗಾರಮ್ಮ ಎಂಬ ಇಬ್ಬರು ಕವಯಿತ್ರಿಯರು ಕೃತಿಗಳನ್ನು ನಿರ್ಮಿಸಿದುದು ಗೋಚರಿಸುತ್ತದೆ

ಚಿಕ್ಕದೇವರಾಜ ಒಡೆಯರ ಬಳಿಯಲ್ಲಿ ಸಂಚಿಯ ಊಳಿಗದವಳಾದ್ದ ಹೊನ್ನಮ್ಮ ಸಾಂಗತ್ಯದ ಛಂದಸ್ಸಿನಲ್ಲಿ "ಹದಿಬದೆಯ ಧರ್ಮ" ವನ್ನು ರಚಿಸಿದ್ದಾಳೆ. ಮಹಾರಾಣಿ ಎಳಂದೂರು ದೇವರಾಜಅಮ್ಮಣ್ಣಿಯ ಪ್ರೋತ್ಸಾಹ, ಗುರು ಅಳಸಿಂಗಾರ್ಯರ ಆಶೀರ್ವಾದಗಳು ಹೊನ್ನಮ್ಮನು 'ಹದಿಬದೆಯ ಧರ್ಮ' ವನ್ನು ಬರೆಯಲು ಪ್ರೇರಣೆ ನೀಡಿತೆನ್ನಬಹುದು.

ಈ ಮಹಿಮೆಯೊಳೆಸೆವಳ ಸಿಂಗಾರ್ಯ
ನುದ್ದಾಮ ಕೃಪಾವೈಭವಕೆ।
ಭೂಮಿಯೆನಿಸಿ ನೆಗಳಿದ ಮೈಮೆಯಿಂದಾಗಿ
ಮಹಾಕೃತಿ ಪೇಳಿದೆನು ॥

ಹೊನ್ನಮ್ಮ ಸರಸ ಸಾಹಿತ್ಯದ ವರದೇವತೆ, ಕಾವ್ಯಾಲಂಕಾರ ನಾಟಕಗಳ ಪವಣಿಗೆಯ ಬಲ್ಲವಳು ಎಂಬ ಬಿರುದುಗಳಿಗೆ ಪಾತ್ರಳಾಗಿದ್ದವಳು. ನಾಲ್ಕು ನೂರಕ್ಕೂ ಹೆಚ್ಚಿನ ಪದ್ಯಗಳನ್ನೊಳಗೊಂಡಿರುವ 'ಹದಿಬದೆಯ ಧರ್ಮ' ಪತಿವ್ರತಾ ಧರ್ಮವನ್ನು ಸ್ತ್ರೀಯರಿಗೆ ತಿಳಿಸಿ ಕೊಡುವಲ್ಲಿ ಸಫಲವಾಗಿದೆ.

ಪೆಣ್ಣಲ್ಲವೇ ತಮ್ಮನೆಲ್ಲ ಪಡೆದ ತಾಯಿ,
ಪೆಣ್ಣಲ್ಲವೇ ಪೊರೆದವಳು
ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು

ಎಂದಿದ್ದಾಳೆ ಹೊನ್ನಮ್ಮ. ಹೊನ್ನಮ್ಮನ ಕೃತಿ 'ಎಲ್ಲರುಮರಿವಂತೆ' ಇದ್ದಿತಂತೆ.

ಹೀಗೆ ಕನ್ನಡ ಸಾಹಿತ್ಯಚರಿತ್ರೆಯನ್ನು ಗಮನಿಸಿದಾಗ ಅನೇಕ ಕವಯಿತ್ರಿಯರ ಉಲ್ಲೇಖ ಕಂಡು ಬರುತ್ತದೆ. ಪುರುಷನಿಗೆ ಸಮಾನಳಾಗಿ ನಿಂತು ಸ್ತ್ರೀ ಕೃತಿ ರಚನೆ ಮಾಡಿದ್ದಾಳೆ. ಆಧುನಿಕ ಯುಗದಲ್ಲಿ ಕಥೆ, ಕಾದಂಬರಿ, ನಾಟಕ, ಕಾವ್ಯ ಮುಂತಾದ ಸಾಹಿತ್ಯದ ಹಲವಾರು ಪ್ರಕರಣಗಳಲ್ಲಿ ಸ್ತ್ರೀಯರ ರಚನೆ ಮಾಡುತ್ತಿರುವುದು ಪ್ರಗತಿಯ ದ್ಯೋತಕ ವಾಗಿದೆ.

★

ಸಾಕು ನರಹರಿ ಭವದ ಬವಣೆಯಿದ್ಯಾಕೆ ಬಳಲಿಸುವಿ ಹರಿ ಹರೀ
ಶ್ರೀ ಕಮಲಪತಿ ಶರಣಜನರೊಳಗ್ಯಾಕೆ ಪೊರೆಯನ್ನ ಹರಿ ಹರೀ ॥ ಪ ॥

ದೊರೆಯೆ ನೀನಿರಲನ್ಯರಿಗೆ ಬಾಯ್ತೆರೆಯಲ್ಯಾಕಿನ್ನು ಹರಿ ಹರೀ
ಪರಮ ಆಪ್ತ ನೀನಿರಲು ಕಾಣದೇ ಪರರಿಗಾಲ್ಪರಿಯೇ ಹರಿ ಹರೀ ॥ ೧ ॥

ಪುತ್ಥಳಿ ಮನೆಯಲ್ಲಿ ಇರಲು ಹಿತ್ತಾಳಿ ಬಯಸುವೆನು ಹರಿ ಹರೀ
ಬಿಟ್ಟು ನಿನ್ನೀಗನ್ಯ ವಿಷಯದಿಂದ್ಹುಟ್ಟುವುದೇ ಸುಖ ಹರಿ ಹರೀ ॥ ೨ ॥

ಬೇಡಿದ್ವರಗಳ ಕೊಡುವೊ ಭೀಮೇಶ ಕೃಷ್ಣ ನೀನಿರಲ್ಹರಿ ಹರೀ
ನೋಡಿ ಸುಖಿಸದೆ ಬಿಟ್ಟು ಕನ್ನಡಿಗ್ಯಾಡಿಗಡರುವೆನು ಹರಿ ಹರೀ ॥ ೩ ॥

—ಹರಪನಹಳ್ಳಿ ಭೀಮವ್ವ.

### ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕ ವಸತಿ ಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

# ಕಿಶೋರ ಜಗತ್



## ಧ್ರುವ

ಸ್ವಾಯಂಭುವ ಮನುವಿನ ಮೊಮ್ಮಗ ಉತ್ತಾನಪಾದ ರಾಜ. ಆತನಿಗೆ ಇಬ್ಬರು ಪತ್ನಿಯರು. ಹಿರಿಯ ಪತ್ನಿ ಸುನೀತಿ, ಧ್ರುವ ಸುನೀತಿಯ ಮಗ. ಈತನು ಹಿಂದಿನ ಜನ್ಮದಲ್ಲಿ ಸದಾಚಾರ ಸಂಪನ್ನನಾಗಿ ರಾಜಮನೆತನದಲ್ಲಿ ಆಸಕ್ತನಾದುದರಿಂದ, ಕ್ಷತ್ರಿಯನಾಗಿ ಜನಿಸಿದ್ದ.

ಒಮ್ಮೆ ಉತ್ತಾನಪಾದ ತನ್ನ ಕಿರಿಯ ಹೆಂಡತಿಯ ಸುರುಚಿಯ ಮಗನಾದ ಉತ್ತಮನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಲಾಲಿಸುತ್ತಿದ್ದನು. ಅಲ್ಲಿಗೆ ಆಗ ಬಂದ ಧ್ರುವ ತಾನು ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಲು ಇಷ್ಟಪಟ್ಟನು. ಆಗ ಅಲ್ಲಿಯೇ ಇದ್ದ ಸುರುಚಿ, "ರಾಜ ಸಿಂಹಾಸನವನ್ನು ಏರುವ ಸೌಭಾಗ್ಯ ನಿನಗೆಲ್ಲಿ ಬರಬೇಕು. ಅದನ್ನು ಅಪೇಕ್ಷಿಸುವುದಾದರೆ ಕಾಡಿಗೆ ಹೋಗಿ ತಪಸ್ಸು ಮಾಡಿ ಮುಂದೆ ನನ್ನ ಹೊಟ್ಟೆಯಲ್ಲಿ ಹುಟ್ಟಿ ಪಡೆ "ಎಂದು ಮೂದಲಿಸಿದಳು.

ಎಳೆ ಮನಸ್ಸಿನವನಾದ ಧ್ರುವನಿಗೆ ಅಪಾರ ನೋವಾಯಿತು. ಅಷ್ಟೆ ಅಲ್ಲದೆ ಅವನ ಕ್ಷಾತ್ರ ರಕ್ತ ಕುದಿಯತೊಡಗಿತು. ತನ್ನ ಜನನಿ ಯಲ್ಲಿಗೆ ಹೋಗಿ ವೃತ್ತಾಂತವೆಲ್ಲವನ್ನು ತಿಳಿಸಿದ. ಆಕೆ ತನ್ನ ಮಗನಿಗೆ ಸಮಾಧಾನ ಮಾಡಿ,ನಿನ್ನ ಚಿಕ್ಕಮ್ಮ ಹೇಳಿದುದರಲ್ಲಿ ಕಾಡಿಗೆ ಹೋಗಿ ತಪಸ್ಸನ್ನಾಚರಿಸುವುದು ಒಳ್ಳೆಯ ವಿಷಯವಾಗಿದೆ. ಆದರಂತೆ ನೀನು ಅನುಸರಿಸು ಎಂದು ತಿಳಿಸಿದಳು.

ತಾಯಿಯ ಅನುಮತಿ ಪಡೆದ ಧ್ರುವ ಯಮುನಾನದಿ ದಂಡೆಗೆ ಬಂದು ತಪಸ್ಸನ್ನು ಆಚರಿಸಿದ. ನಾರದರಿಂದ ಮತ್ತು ಸಪ್ತರ್ಷಿಗಳಿಂದ ಮಂತ್ರೋಪದೇಶವನ್ನು ಪಡೆದು ಘೋರತಪಸ್ಸನ್ನಾಚರಿಸಿದನು. ಅಖಂಡವಾದ ಈ ತಪಸ್ಸಿಗೆ ವಿಷ್ಣುವು ಮೆಚ್ಚಿ ದರ್ಶನವನ್ನು ನೀಡಿದನು. ಭೂಲೋಕದಲ್ಲಿ ಏಕಚಕ್ರಾಧಿಪತ್ಯವನ್ನು ದೀರ್ಘಾಯುಷ್ಯ ವನ್ನು ಅನುಗ್ರಹಿಸಿದನು. ಧ್ರುವನು 'ತಾನು ದೇವರಲ್ಲಿ ಮೋಕ್ಷವನ್ನು ಬೇಡಿದ್ದರೆ ಸೂಕ್ತ ವಾಗಿರುತ್ತಿತ್ತು. ನನ್ನ ಮನೋಭಿಲಾಷೆಯಂತೆ ನಶ್ವರವಾದ ಈ ಸಂಪತ್ತನ್ನು ದೇವರು ಅನುಗ್ರಹಿಸಿದನಲ್ಲಾ!' ಎಂದು ಪಶ್ಚಾತ್ತಾಪ ವನ್ನು ಪಟ್ಟನು.

ಅರಮನೆಗೆ ಬಂದಾಗ ಎಲ್ಲರೂ ಹಾರ್ದಿಕ ವಾಗಿ ಸ್ವಾಗತಿಸಿದರು. ಭಗವಂತನ ದರ್ಶನಕ್ಕೆ ಕಾರಣಳಾದ ತನ್ನ ಮಲತಾಯಿ ಯನ್ನು ಯಾವ ಕಪಟವಿಲ್ಲದೆ ಧ್ರುವನು ವಂದಿಸಿದನು ತನ್ನ ತಮ್ಮನಾದ ಉತ್ತಮನೊ ಡನೆ ಸುಖವಾಗಿ ಇದ್ದನು. ಒಮ್ಮೆ ಉತ್ತಮನು ಬೇಟೆಗೆ ಹೋಗಿದ್ದಾಗ ಹಿಮಪರ್ವತದಲ್ಲಿ ಕುಬೇರನ ಅನುಚರರಾದ ಯಕ್ಷರ ಯುದ್ಧ ದಲ್ಲಿ ಮರಣಿಸಿದ. ಸುರುಚಿ ಈ ಸುದ್ದಿಕೇಳಿ ಅಲ್ಲಿಗೆ ಹೋಗಿ ಮರಣಿಸಿದಳು. ಕೋಪಾವಿಷ್ಟನಾದ ಧ್ರುವ ಯಕ್ಷರೊಂದಿಗೆ ಯುದ್ಧ ಆರಂಭಿಸಿದ. ಕುಬೇರ,ಧ್ರುವ ಯುದ್ಧ ಮಾಡುತ್ತಿರುವಾಗ ಸ್ವಾಯಂಭುವಮನು ಅಲ್ಲಿಗೆ ಬಂದು ಧ್ರುವನಿಗೆ ಶಾಂತಿಯನ್ನು ಉಪದೇಶಿಸಿ ಯುದ್ಧವನ್ನು ನಿಲ್ಲಿಸಲು ಹೇಳಿದ. ಕುಬೇರನನ್ನು ಯುದ್ಧಮಾಡದಂತೆ ತಡೆದು ಇಬ್ಬರನ್ನೂ ಸ್ನೇಹಿತರನ್ನಾಗಿಸಿದ.

ಧ್ರುವ ಅನೇಕ ಯಜ್ಞಗಳನ್ನು ಮಾಡಿ ಮುವತ್ತಾರು ಸಾವಿರ ವರ್ಷಗಳವರೆಗೆ ರಾಜ್ಯವನ್ನು ಪರಿಪಾಲಿಸಿದನು. ಪುನಃ ಅರಣ್ಯಕ್ಕೆ ಹೊರಟು ತಪಸನ್ನಾಚರಿಸಿದ. ಭೂಲೋಕವನ್ನು ಬಿಟ್ಟು ತರುವಾಯ ಆಕಾಶದ ಉತ್ತರ ದಿಕ್ಕಿನಲ್ಲಿ ತನ್ನ ಹೆಸರಿನ ಸ್ಥಿರವಾದ ಪದವಿಯನ್ನು ಹೊಂದಿದನು. ಈಗಲೂ ದೇವತೆಗಳು ಮಾನವರು ಮುಕ್ತಿ ಯನ್ನು ಹೊಂದಲು ಧ್ರುವ ಮಂಡಲ ಹಾದು ಹೋಗಬೇಕು ಎನ್ನುವ ಪ್ರತೀತಿ ಉಂಟು.

ಶ್ರೀ ಜಿ. ಶ್ರೀಧರ್

# ಇಬ್ಬರು ಬಾಲಕರು

## ಪ್ರಹ್ಲಾದ

ಕಶ್ಯಪ ಮುನಿಯಿಂದ ದಿತಿಯೆಂಬಾಕೆ ಯಲ್ಲಿ ಜನಿಸಿದವನು ಹಿರಣ್ಯಕಶಿಪು. ಹಿರಣ್ಯಾಕ್ಷ ಈತನ ಸೋದರ. ಇವರಿಬ್ಬರೂ ಪರಾಕ್ರಮ ಸಂಪನ್ನರೆನಿಸಿ ದೈತ್ಯವಂಶ ವನ್ನು ವೃದ್ಧಿಗೊಳಿಸಿದರು. ಹಿರಣ್ಯಾಕ್ಷ ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ, ಅನೇಕ ವರಗಳನ್ನು ಪಡೆದು ಲೋಕಕಂಟಕನಾಗಿದ್ದ. ಶ್ರೀಹರಿ ವರಾಹ ಅವತಾರ ಪಡೆದು ಆತನನ್ನು ಸಂಹರಿಸಿದ, ಮೊದಲಿಂದಲೂ ಹರಿದ್ವೇಷಿ ಯಾಗಿದ್ದ ಹಿರಣ್ಯಕಶಿಪು ಇನ್ನೂ ಅಧಿಕವಾ ಶ್ರೀಹರಿಯಲ್ಲಿ ದ್ವೇಷ ಮಾಡಲುತೊಡಗಿದ.

ಹಿರಣ್ಯಕಶಿಪು ಬ್ರಹ್ಮನನ್ನು ತಪಸ್ಸಿ ನಿಂದ ಮೆಚ್ಚಿಸಿ ವರಗಳನ್ನು ಪಡೆದನು. ಪ್ರಾಣಕ್ಕೆ ತೊಂದರೆಯಾಗದಂತೆ 'ತನಗೆ ಬ್ರಹ್ಮನಿಂದ ಸೃಷ್ಟಿಯಾದ ಯಾವ ಪ್ರಾಣಿಯಿಂದಾಗಲೀ, ಯಾವುದೇ ಆಯುಧ ದಿಂದಲೂ ಮರಣವಾಗದಂತೆ ವರವನ್ನು ನೀಡು' ಎಂದು ಕೇಳಿದನು. ಬ್ರಹ್ಮನು ತಥಾಸ್ತು ಎಂದು ವರವನ್ನು ದಯಪಾಲಿಸಿ

ದನು. ಇದರಿಂದ ಕೊಬ್ಬಿದ ಹಿರಣ್ಯಕಶಿಪು ದಿಕ್ಪಾಲಕರನ್ನು ಸದೆಬಡೆದನು. ಸಮಸ್ತ ದೇವತೆಗಳನ್ನು ಹೆದರಿಸಿ ಅವರಿಂದ ಅಧಿಕಾರವನ್ನೆಲ್ಲಾ ಕಸಿದುಕೊಂಡನು.

ಹಿರಣ್ಯಕಶಿಪು ಜಂಭನೆಂಬ ರಾಕ್ಷಸನ ಮಗಳಾದ ಕಯಾದುವೆಂಬಳನ್ನು ವಿವಾಹವಾಗಿದ್ದನು. ಹಿರಣ್ಯಕಶಿಪು ತಪಸ್ಸಿಗಾಗಿ ಹೋಗಿದ್ದಾಗ ಇಂದ್ರನು ಆತನ ರಾಜ್ಯವನ್ನು ಆಕ್ರಮಿಸಿದ. ಕಯಾದು ತುಂಬುಗರ್ಭಿಣಿಯಾಗಿದ್ದಳು. ಇಂದ್ರ ಆಕೆಯನ್ನು ಯಾವ ರೀತಿಯಲ್ಲೂ ಪೀಡಿಸದೆ ನಾರದರಿಗೆ ಒಪ್ಪಿಸಿದ. ಕಯಾದು ಗಂಗಾ ತೀರದಲ್ಲಿದ್ದ ನಾರದರ ಆಶ್ರಮದಲ್ಲಿ ವಾಸವಾಗಿದ್ದು ಅವರಿಂದ ವಿಷ್ಣು ಮಂತ್ರೋಪದೇಶ ಪಡೆದಳು. ಹಿರಣ್ಯಕಶಿಪು ತಪಸ್ಸಿನಿಂದ ಹಿಂತಿರುಗಿದಾಗ ನಾರದರು ಕಯಾದುವನ್ನು ಆತನಿಗೆ ಒಪ್ಪಿಸಿದರು. ಕಯಾದುವು ಪ್ರಹ್ಲಾದನಿಗೆ ಜನ್ಮವಿತ್ತಳು.

ಗರ್ಭದಲ್ಲಿಯೇ ನಾರದರಿಂದ ವಿಷ್ಣುವಿನ ನಾಮೋಪದೇಶವಾದ್ದರಿಂದ ಆತ ವಿಷ್ಣುಭಕ್ತನಾದ. ಪ್ರಹ್ಲಾದ ವಿಷ್ಣುಭಕ್ತನಾದುದರಿಂದ ಆತನನ್ನ ಸರಿಪಡಿಸಲು ಹಿರಣ್ಯಕಶಿಪು ಸೂಕ್ತಗುರುವನ್ನು ಏರ್ಪಾಟು ಮಾಡಿದ. ಆದರೆ ಯಶಸ್ವಿಯಾಗಲಿಲ್ಲ. ತನಗ ಹಗೆಯಾದ ವಿಷ್ಣುವನ್ನು ಭಜಿಸುವುದು ಸಮ್ಮತವಲ್ಲವೆಂದು ಪರಿಪರಿಯಾಗಿ ಹೇಳಿದರೂ ಪ್ರಹ್ಲಾದ ವಿಷ್ಣುವನ್ನೇ ಅನನ್ಯವಾಗಿ ನಂಬಿದ್ದನು. ತನ್ನದಾರಿಗೆ ತರಬೇಕೆಂದು ಹರತೊಟ್ಟು ವಿಫಲನಾದ ಹಿರಣ್ಯಕಶಿಪು ಕುಪಿತನಾದ.

ತಾಮಸಗುಣದವನಾದ ಹಿರಣ್ಯಕಶಿಪು ತನ್ನಮಗನನ್ನು ಕೊಲ್ಲಲು ಹಿಂಜರಿಯಲಿಲ್ಲ. ಅವನನ್ನು ಕೊಲ್ಲದೆ ತನಗೆ ಸುಖವಿಲ್ಲವೆಂಬ ಭಾವನೆಯಿಂದ ಅನೇಕ ಮಾಟಗಳನ್ನು ಪ್ರಯೋಗಿಸಿದ. ಪರ್ವತದಿಂದ ತಳ್ಳಿಸಿದನು. ಆಗಲೂ ಸಾಯದಿದ್ದ ತನ್ನ ಮಗನ ಬಗ್ಗೆ ಅಚ್ಚರಿ ಪಡದೆ ಘಟಸರ್ಪಗಳಿಂದ ಕಚ್ಚಿಸಿದ. ದಿಗ್ಗಜಗಳಂತಹ ಆನೆಗಳಿಂದ ತುಳಿಸಿದ ಆಗಲೂ ಸಹ ಪ್ರಹ್ಲಾದ ಮರಣಿಸಲಿಲ್ಲ. ವಿಷಮಿಶ್ರವಾದ ಆಹಾರದಿಂದ ಕೊಲ್ಲಲು ಪ್ರಯತ್ನಿಸಿ ವಿಫಲನಾದ.

ಕಡೆಗೆ ತನ್ನ ಕೈಯಾರೆ ಪ್ರಹ್ಲಾದನನ್ನು ಕೊಲ್ಲಲು ಮನಸ್ಸು ಮಾಡಿದ. ಸಂಧ್ಯಾ ಸಮಯದಲ್ಲಿ ತನ್ನ ಮಗ ಪ್ರಹ್ಲಾದನನ್ನು ಕರೆದು "ಎಲ್ಲಿ ನಿನ್ನ ಆ ವಿಷ್ಣು?" ಎಂದು ಅರ್ಭಟಿಸಿದ. ಸರ್ವಾಂತರ್ಯಾಮಿಯಾದ ವಿಷ್ಣು ಎಲ್ಲೆಲ್ಲಿಯೂ ಇರುವನೆಂದು ಪ್ರಹ್ಲಾದ ಉತ್ತರಿಸಿದಾಗ "ಹಾಗಾದರೆ ಈ ಕಂಭದಲ್ಲಿರುವನೇ?" ಎಂದು ಅಪಹಾಸ್ಯದ ನಗೆ ನಕ್ಕ ಹಿರಣ್ಯಕಶಿಪು. ಅಷ್ಟೇ ಅಲ್ಲದೆ ತನ್ನ ಕಾಲಿನಿಂದ ಕಂಭವನ್ನು ಜೋರಾಗಿ ಒದ್ದನು. "ನ ಮೇ ಭಕ್ತ ಪ್ರಣಶ್ಯತಿ—ನನ್ನ ಭಕ್ತನಿಗೆ ಎಂದೂ ಸಾವಿಲ್ಲ" ಎಂಬಂತೆ ವಿಷ್ಣು ಇಲ್ಲಿಯವರಿಗೂ ಪ್ರಹ್ಲಾದನನ್ನು ರಕ್ಷಿಸಿದ್ದ. ಇನ್ನು ತನ್ನಭಕ್ತನಿಗೆ ಹಿಂಸೆ ಮುಂದುವರಿಯಬಾರದೆಂಬ ಉದ್ದೇಶದಿಂದ ಹಿರಣ್ಯಕಶಿಪುವನ್ನು ಕೊಲ್ಲಲು ನರಸಿಂಹ ಅವತಾರವೆತ್ತಿದನು.

ಸಿಂಹದ ಮೋರೆಯಂತೆ ಮುಖವು ಮಿಕ್ಕ ಅಂಗಾಂಗಳು ಮನುಷ್ಯನ ರೀತಿಯದೇ ಹೊಂದಿ ನರಸಿಂಹ ಅವತಾರದಿಂದ ಕಂಭದಲ್ಲಿ ಪ್ರತ್ಯಕ್ಷನಾದನು. ಹಿರಣ್ಯಕಶಿಪುವನ್ನು ನಿರಾಯಾಸವಾಗಿ ಎತ್ತಿಕೊಂಡು ಬಾಗಿಲ ಹೊಸ್ತಿಲ ಮೇಲೆ ಕುಳಿತು, ತನ್ನ ತೊಡೆಯ ಮೇಲೆ ದೇಹವನ್ನು ಇರಿಸಿಕೊಂಡು ಹರಿತವಾದ ಉಗುರುಗಳಿಂದ ಅವನ ಎದೆಯನ್ನು ಸೀಳಿ ಸಂಹರಿಸಿದನು. ಪ್ರಹ್ಲಾದನನ್ನು ರಕ್ಷಿಸಿದ್ದಲ್ಲದೆ ರಾಜ್ಯವನ್ನು ಒಪ್ಪಿಸಿ ಆಶೀರ್ವದಿಸಿದ.

---

# ಶ್ರೀ ಪದ್ಮಾವತಿ ಅಮ್ಮನವರ ದೇವಾಲಯ

## ತಿರುಚಾನೂರು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ನಿತ್ಯಕುಂಕುಮಾರ್ಚನೆಯ ಶುಲ್ಕವನ್ನು ರೂ 150-00 ಗಳಿಗೆ ನಿಗಧಿಗೊಳಿಸಲಾಗಿದೆ, ಈ ಹೊಸ ಶುಲ್ಕ ಪದ್ಧತಿ ಈ ಕೂಡಲೇ ಜಾರಿಗೆ ಬಂದಿದ್ದು ಈ ಹಿಂದೆಯೇ ನಿತ್ಯಕುಂಕುಮಾರ್ಚನೆಯನ್ನು ಮಾಡಿಸಲು ಶುಲ್ಕ ಪಾವತಿ ಮಾಡಿರುವ ಗೃಹಸ್ಥರ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸಲಾಗುವುದು. ಆಸಕ್ತ ಭಕ್ತರು ವಿವರಗಳಿಗೆ ಸ್ಥಳೀಯ ಪೇಷ್ಕಾರ್ ಅವರನ್ನು ವಿಚಾರಿಸಬಹುದು.

**ಪೇಷ್ಕಾರ್**

---

# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

# ಯುವವಾಣಿ

ಸಂಪಾದನೆ! ಸಂಪಾದನೆ! ಸಂಪಾದನೆಯಿಲ್ಲದೆ ಜೀವನ ನಡೆಯದು. ಸಂಪಾದನೆಗಾಗಿಯೇ ಲೋಕ ಬಡಿದಾಡುತ್ತಿದೆ. ಜೀವನದ ಹಾಸುಹೊಕ್ಕಿಗೆ ಸಂಪಾದನೆಯೇ ಮೂಲಕಾರಣ. ಹೊಲ, ಮನೆ, ಎತ್ತು, ಧನ, ಹಿತ್ತಲು, ತೋಟ ಇತ್ಯಾದಿಗಳಲ್ಲದೆ ವಿದ್ಯೆ, ಪದವಿ, ಹಣ, ಅಧಿಕಾರ, ಇತ್ಯಾದಿಗಳನ್ನು ಸಂಪಾದಿಸಲು ಜನರು ಹೆಣಗುತ್ತಾರೆ. ಈ ಹೆಣಗಾಟದಲ್ಲಿ ಹೆಣ ಆದರೂ ಚಿಂತೆಯಿಲ್ಲ. ತಾನೂ ತನ್ನವರೂ ಬದುಕಬೇಕೆಂಬ ಸ್ವಾರ್ಥದಿಂದಲೇ ಮುಂದುವರಿಯುತ್ತಾರೆ ಬಹುಮಂದಿ.

ಸಂಪತ್ತು ಮುಖ್ಯವಾಗಿ ಎರಡು ವಿಧ. ಕಣ್ಣಿಗೆ ಕಾಣುವ ಸಂಪತ್ತು, ಮತ್ತು ಕಣ್ಣಿಗೆ ಕಾಣದ ಸಂಪತ್ತು. ಆಸ್ತಿಪಾಸ್ತಿಗಳೆಲ್ಲ ಕಣ್ಣಿಗೆ ಕಾಣುತ್ತವೆ. ದಾಖಲೆಗಳಿರುತ್ತವೆ, ಇವುಗಳ ಸಂಪಾದನೆಯಲ್ಲಿ ಹಾಗೂ ಇವುಗಳಿಗೆ ಏನಾದರೂ ಅಡ್ಡಿ ಬಂದಲ್ಲಿ ಕೋರ್ಟ್ ಕಛೇರಿಗಳಿಗೂ ಹೋಗಿ ಬರುತ್ತಾರೆ. ಬಡವನಾಗಲಿ, ಬಲ್ಲಿದನಾಗಲಿ ರಾಜ ಮಹಾರಾಜನಾಗಲಿ ತಾನು ಸಂಪಾದಿಸಿದ ಆಸ್ತಿಪಾಸ್ತಿಯು ಅವನ ಕುಟುಂಬದ ಭೋಗ ಜೀವನಕ್ಕೆ, ವಿಲಾಸಕ್ಕೆ, ಸುಖಕ್ಕೆ ಕಾರಣ. ಸುಖ ಬೇಡ ಎಂದು ಯಾರು ತಾನೇ ಹೇಳುತ್ತಾರೆ. ಬಡವನಿಗೂ ಸುಖ ಬೇಕು, ಶ್ರೀಮಂತನಿಗೂ ಸುಖ ಬೇಕು. ಆದರೆ ಹೇಗೋ ದುಡಿದು, ಹೇಗೋ ಸಂಪಾದಿಸಿ, ಸುಖಪಟ್ಟರಾಯಿತೆಂದು ಹಲವರು ಭಾವಿಸಿದ್ದಾರೆ. ಇವೆಲ್ಲ ಸ್ವಾರ್ಥಕ್ಕಾಗಿ; ಇವೆಲ್ಲ ಭೌತಸಂಪತ್ತು.

ಲೋಕದಲ್ಲಿ ಸಂಪಾದನೆಯ ದಾರಿಗಳು ಹಲವಾರು ಉಂಟು. ಆದರೆ ಅವುಗಳೆಲ್ಲವೂ ಯೋಗ್ಯವೆ? ಸೂಕ್ತವೆ? ಎಂಬುದನ್ನು ತಿಳಿಯುವುದೇ ಇಲ್ಲ. ಶಿಷ್ಟಾಚಾರದಿಂದಲೂ ಸಂಪಾದಿಸುತ್ತಾರೆ, ಭ್ರಷ್ಟಾಚಾರದಿಂದಲೂ ಸಂಪಾದಿಸುತ್ತಾರೆ. ಶಿಷ್ಟಾಚಾರದ ಸಂಪಾದನೆಯು ಯೋಗ್ಯವಾದ ಮಾರ್ಗ, ಆದರೆ ತೃಪ್ತಿಯಿಲ್ಲವೆಂದೂ ಅತ್ಯಾಸೆಯಿಂದಲೂ, ದೊರೆತ ಅವಕಾಶ ಬಿಡಬಾರದೆಂದೂ ಕೆಲವರು ಭಾವಿಸಿರುತ್ತಾರೆ. ಭ್ರಷ್ಟಾಚಾರದ ಸಂಪಾದನೆಯಿಂದ ತಾತ್ಕಾಲಿಕವಾಗಿ ಸುಖ ದೊರೆತರೂ ಅದು ಮಣ್ಣು ಮುಕ್ಕಿಸದೆ ಬಿಡದು.

ಲೌಕಿಕ ಸಂಪತ್ತಿನ ಸಂಪಾದನೆಯು ಪುನಃ ಪುನಃ ಭವಚಕ್ರದಲ್ಲಿ ಸುತ್ತುವಂತೆ ಮಾಡುತ್ತದೆ, ಕೆಲವರು ಇನ್ನೊಬ್ಬರ ಏಳಿಗೆಯನ್ನು ಕಂಡು ಅಸೂಯೆಪಡುವುದುಂಟು. ಇದ್ದರೂ ಇನ್ನೊಬ್ಬರ ಮೇಲೆ ಅಸೂಯೆ. ಹೀಗೆ ಅಸೂಯೆಪಟ್ಟ ಹೊಟ್ಟೆಕಿಚ್ಚು ಪಟ್ಟವರನ್ನು ಸುಡುತ್ತದೆಯೇ ವಿನಾ ಇತರರನ್ನಲ್ಲ. ಕೆಲವರಂತೂ ವಿಪರೀತ ಸ್ವಾರ್ಥಿಗಳಾಗಿ, ದುರ್ಬುದ್ಧಿಯುಳ್ಳವರಾಗಿರುತ್ತಾರೆ.

# ಸಂಪಾದನೆ

ಯಾವುದನ್ನು ಸಂಪಾದಿಸಬೇಕು? ಸಂಪಾದನೆಯ ದಾರಿ ಯಾವುದಿರಬೇಕು? ಎಂಬುದನ್ನು ಸರಿಯಾಗಿ ವಿವೇಚಿಸಬೇಕಾಗಿದೆ.

ಮೊದಲನೆಯದಾಗಿ ವಿದ್ಯೆಯ ಸಂಪಾದನೆ ಎಲ್ಲರಿಗೂ ಅಗತ್ಯ. ಬಾಲ್ಯವು ವಿದ್ಯಾರ್ಜನೆಗೆ ಸರಿಯಾದ ಕಾಲ. ಇದನ್ನು ಸದುಪಯೋಗಪಡಿಸಿಕೊಂಡಲ್ಲಿ ಮುಂದಿನ ಜೀವನ ಸುಗಮ. ಇಲ್ಲವೆ ಮುಂದಿನ ಬದುಕು ಕತ್ತಲಲ್ಲಿ ಸಾಗಬೇಕಾಗುತ್ತದೆ. ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆ ಮತ್ತು ಕಾಲೇಜುಗಳಲ್ಲಿ ವ್ಯಾಸಂಗ ಮಾಡುವುದುಂಟು. ವಿದ್ಯೆಯನ್ನು ಸಂಪಾದಿಸುವ ಅವಧಿಯಲ್ಲಂತೂ ಅತ್ಯಂತ ಶುಚಿತ್ವ, ಏಕಾಗ್ರತೆ, ಸತ್ಸಹವಾಸ, ವ್ಯಾಸಂಗ ನಿಷ್ಠೆ ಇತ್ಯಾದಿಗಳು ಅಗತ್ಯ. 'ಶುಚಿಯಿಲ್ಲದಂಗ ಬೆಸಕಯ್ಯುಗ್ಮೆ ವಿದ್ಯೆಗಳಾವುವಾದೊಡಂ' ಎನ್ನುತ್ತಾನೆ ವರಕವಿ ನಾಗಚಂದ್ರ, ಆದ್ದರಿಂದ ಚಿತ್ತಶುದ್ಧಿ ಅತ್ಯಗತ್ಯ.

ನಿಜವಾದ ವಿದ್ಯೆಯ ಸಂಪಾದನೆಯಿಂದ ಮಾನವನಿಗೆ ಅಮೃತತ್ವ ಪ್ರಾಪ್ತಿಯಿದೆ, "ಬಿಂಕಕ್ಕೆ ಡೊಳ್ಳೀವುದದು ವಿದ್ಯೆಯೆ? ಅವಿದ್ಯೆ! ತವಿವುದಾವುದೊ ಅಹಂಕಾರಮಂ ಅದು ವಿದ್ಯೆ, ಮಿಕ್ಕುದೆಲ್ಲಂ ಅವಿದ್ಯೆ"- ಎಂದಿದ್ದಾರೆ ಕುವೆಂಪು. ವಿದ್ಯೆಯು ಆಡಂಬರದ ವಸ್ತುವಲ್ಲ, ಕೊಳ್ಳುವ ವಸ್ತುವಲ್ಲ. ಬಹಿರ್ಭೂಷಣ ವಸ್ತುವಲ್ಲ. ಬುದ್ಧಿ, ಭಾವನೆ, ಕಲ್ಪನೆ ಪ್ರತಿಭೆಗಳನ್ನು ಹದಗೊಳಿಸಿ, ಸಾರಸ್ವತ, ವಿಜ್ಞಾನ, ಭಾಷೆ, ಸಮಾಜಶಾಸ್ತ್ರ ಮೊದಲಾದುವನ್ನು ಕಲಿಸಿ ಉತ್ತಮ ರಾಷ್ಟ್ರೀಯರಾಗಿ ಬಾಳಲು ನೆರವು ನೀಡುವುದೇ ವಿದ್ಯೆ. ಇದು ಮನುಜನಿಗೆ ಅಧಿಕ ರೂಪು, ನಿಗೂಢ ರಕ್ಷಿತ ವಿತ್ತ, ಸುಖ ಸಂಪಾದನೆಯ ಮೂಲ. ಮತ್ತು ಉತ್ತಮ ನಿಧಿಯೂ ಆಗಿದೆ. ಅಲ್ಲದೆ ಇದು ಮಾತೆಯಂತೆ ಸಲಹುತ್ತದೆ, ಪಿತನಂತೆ ಹಿತವನ್ನುಂಟುಮಾಡುತ್ತದೆ, ಸತಿಯಂತೆ ಸಂತೋಷಗೊಳಿಸುತ್ತದೆ, ದಿಕ್ಕು ದಿಕ್ಕಿನಲ್ಲಿಯೂ ಕೀರ್ತಿಯನ್ನುಂಟುಮಾಡುತ್ತದೆ, ಹಣವನ್ನೂ ಕೊಡುತ್ತದೆ ಕಲ್ಪವೃಕ್ಷದಂತಿದ್ದು ಇದು ಕೊಡದಿರುವುದು ಮತ್ತೇನನ್ನು? ಎಂದು ಕವಿಗಳು ಹೇಳುತ್ತಾರೆ.

ವಿದ್ಯೆಯ ಸಂಪಾದನೆಯಿಂದ ಮಾನವನು ದ್ವಿಜನಾಗುತ್ತಾನೆ, ಮೊದಲಿನದು ನೈಸರ್ಗಿಕ ಜನ್ಮ, ವಿದ್ಯಾರ್ಜನೆಯಿಂದ ಮರುಹುಟ್ಟು; ವಿಕಾಸದ ನೆಲೆ, ಬೆಲೆ, ಆದ್ದರಿಂದ ಲೋಕೋತ್ತರತೆಯನ್ನು ಪಡೆಯಲು ವಿದ್ಯೆಯ ಸಂಪಾದನೆ ಅಗತ್ಯ, ಮನುಷ್ಯನ ಮನಸ್ಸು, ಶೀಲ ಹಾಗೂ ಬುದ್ಧಿ ಪ್ರತಿಭೆಗಳ ಬೆಳವಣಿಗೆಯು ಸರಿಯಾದ ಮಾರ್ಗದಲ್ಲಿ ಪೋಷಿಸಿಕೊಂಡು ಬರುವುದಕ್ಕೆ ಜೀವನದಲ್ಲಿ ಸಂಯಮ ಸಾಧಿಸುವುದಕ್ಕೆ ವಿದ್ಯೆಯ ಸಂಪಾದನೆ ಅಗತ್ಯ. ಈ ಸಂಸ್ಕಾರವು ಮಾನವನಿಗೆ ಸಕಾಲದಲ್ಲಿ ದೊರೆಯದಿದ್ದರೆ ಆತ ಸುಖ-ಶಾಂತಿ ಅನುಭವಿಸುವುದು ಸಾಧ್ಯವೇ ಇಲ್ಲ. ಒಟ್ಟಿನಲ್ಲಿ ವಿದ್ಯೆಯ ಸಂಪಾದನೆ ಜೀವನದ ಬೆಳಕು. ಇದು ಎಲ್ಲರಿಗೂ ಅಗತ್ಯ.

ವಿದ್ಯೆಯ ಸಂಪಾದನೆಯಷ್ಟೇ ಮತ್ತೊಂದು ಮುಖ್ಯ ಸಂಪಾದನೆಯೆಂದರೆ ಶೀಲಸಂಪಾದನೆ. ಶೀಲವಂತನು ಧರ್ಮ-ಅಧರ್ಮ,

ಪ್ರೊ॥ ಡಿ. ಟಿ. ರಂಗಸ್ವಾಮಿ

ಸತ್ಯ – ಅಸತ್ಯ, ಹಿಂಸೆ – ಅಹಿಂಸೆಗಳನ್ನು ತೂಗಿ ನೋಡಿ ಶುಚಿಯಾದುದನ್ನೂ ಪವಿತ್ರ ವಾದುದನ್ನೂ ಸಂಪಾದಿಸುತ್ತಾ ಹೋಗು ವನು. ಈತ ಬಡವನಾದರೂ ಚಿಂತೆಯಿಲ್ಲ, ಶೀಲವೇ ದೊಡ್ಡ ಸಂಪತ್ತು. ಈತ ಹೃದಯ ಶ್ರೀಮಂತ, ನಿತ್ಯ ಮಹಂತ. ಗುಣವಂತ. ಈತ ಯಾವಾಗಲೂ ಶಿವಪಥನಲ್ಲಿ ಅಥವಾ ಮಹಾತ್ಮರ ದಾರಿಯಲ್ಲಿ ನಡೆಯಬಲ್ಲವ ನಾಗಿರುತ್ತಾನೆ.

ವಿದ್ಯೆ ಮತ್ತು ಶೀಲ ಇವೆರಡರ ಸಂಪಾದನೆ ಗಳು ಎಳೆಮೆಯಿಂದಲೇ ಕ್ರಮಬದ್ಧವಾಗಿ ನಡೆಯಬೇಕು, ಇನ್ನೂ ಇವೆರಡಕ್ಕೂ ಮಿಗಿ ಲಾದ ಮತ್ತೊಂದು ಸಂಪತ್ತಿನ ಸಂಪಾದನೆ ಯೆಂದರೆ ದೈವೀಗುಣ ಸಂಪಾದನೆ, ಶರಣರು ಇದನ್ನು ಶೂನ್ಯಸಂಪಾದನೆಯೆನ್ನುತ್ತಾರೆ. ಈ ಸಂಪಾದನಕಾರನಲ್ಲಿ ಭ್ರಾಂತಿ ಅಳಿದು ಏಕೋಭಾವ, ಸಮದರ್ಶನ, ಸ್ಥಿತ ಪ್ರಜ್ಞತ್ವ ಉಂಟಾಗುತ್ತದೆ. ಈತ ಎಂದೂ ಅಶಾಶ್ವತವಾದುದಕ್ಕೆ ಕೈಹಾಕುವುದಿಲ್ಲ. ಈತ ನಿಜಗುಣನಿರತ, ದೈವೀಗುಣ ಸಂಪಾದ ನೆಯೇ ಇವ್ನ ಜೀವನರೀತಿಯಾಗಿದೆ.

ವಿವಿಧ ವೃತ್ತಿ, ಪದವಿ, ಅಧಿಕಾರದಲ್ಲಿ ರುವವರು ಧರ್ಮಶ್ರದ್ಧೆಯ ದೈವೀಗುಣ ಸಂಪಾದನೆಯ ನೀತಿನಿಯಮಗಳೊಂದನ್ನೂ ಲೆಕ್ಕಿಸದೆ ಭ್ರಷ್ಟಾಚಾರವ ಕಾಡು ನೃತ್ಯದಲ್ಲಿ ಇಂದು ತೊಡಗಿರುವುದನ್ನು ಕಂಡು ವಿಷಾದ ವೆನಿಸುತ್ತದೆ, ಇವರ ವಿಷಾದಯೋಗಕ್ಕೆ ದೈವೀಗುಣ ಸಂಪಾದನೆಯ ಅರಿವೇ ಸೂಕ್ತ ಹಿತೋಪದೇಶ ಮತ್ತು ಚಿಕಿತ್ಸೆಯಾಗಿದೆ.

ದೈವೀಗುಣ ಸಂಪಾದನೆಗೆ ಮುಖ್ಯವಾಗಿ ತನು ಮನದ ಅವಗುಣಗಳು ತೊಲಗಬೇಕು. ತನುಮನಗಳಲ್ಲಿ ದೈವೀಗುಣಗಳು ತುಂಬ ಬೇಕು. ತನುವಿನಲ್ಲಿ ಎಂದರೆ ಕಣ್ಣು, ಕಿವಿ ಮುಂತಾದ ಐದು ಇಂದ್ರಿಯಗಳು. ಎಂದರೆ ರೂಪ, ರಸ, ಗಂಧಾದಿಗಳೆಲ್ಲ ಶಿವಸುಖಕ್ಕೆ ಕಾರಣವಾಗಬೇಕು. ಹೀಗೆಯೇ ಮನದಲ್ಲಿ ಎಂದರೆ ಬುದ್ಧಿ, ಭಾವ, ಕಲ್ಪನೆ, ಪ್ರತಿಭೆ ಗಳಿಗೆ ನೆಲೆವೀಡಾದ ಮನಸ್ಸಿನ ಭಾವನೆ, ಆಲೋಚನೆ, ಪ್ರಚೋದನೆಗಳು ಶಾಶ್ವತ ಮೌಲ್ಯಗಳ ಚಿಂತನೆ ನಡೆಸಿ ಶಿವಸುಖಕ್ಕೆ ಕಾರಣವಾಗಬೇಕು. ಹೀಗೆ ದೈವೀಗುಣ ಸಂಪಾದಿಸಬೇಕು. ಅರಿವಿನ ತೃಪ್ತಿಗೆ ಅನು ಭಾವದ ಸಂಪಾದನೆ. ಅರಿತರೆ ಶರಣ, ಮರೆತರೆ ಮಾನವ ನಿಜ ಅರಿತರೆ ವಿದ್ಯಾರ್ಥಿ, ಮರೆತರೆ ಹುಡುಗ, ಅರಿತರೆ ದಿವ್ಯಜೀವನದ ಹೆದ್ದಾರಿ, ಮರೆತರೆ ಮಸಣದ ದಾರಿ.

ದೈವೀಗುಣ ಸಂಪಾದನೆಯಲ್ಲಿಯೇ ಸತ್ಯ ಶಿವ ಸುಂದರಗಳ ಸಮ್ಮೇಳನವಿದೆ. ಅನಂ ದಭಾವ ಸಾಗರವಿದೆ. ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಮಹತ್ವಾ ಕಾಂಕ್ಷೆಯಾಗಿದೆ, ಪರಿಪೂರ್ಣವಾದ ಜೀವ ನಕ್ಕೆ ದಾರಿಯೇ ಈ ಸಂಪಾದನೆಯಾಗಿದೆ. ನಮ್ಮ ಅಪೂರ್ವವಾದ ಲೌಕಿಕ ಜೀವನ ವನ್ನು ಶುಚಿಗೊಳಿಸಿ ಇಲ್ಲಿಯೂ ಸಲ್ಲುವಂತೆ, ಅಲ್ಲಿಯೂ ಸಲ್ಲುವಂತೆ ಮಾಡುವ ಶಕ್ತಿಯಿದೆ ಈ ಸಂಪಾದನೆಗೆ. ಇಂಥ ಶಾಶ್ವತ ಸಂಪತ್ತಿನ ಸಂಪಾದನೆಯಿಂದ ಲೋಕವು ಲೋಕೋ ತ್ತರ, ಭವವು ಭವ್ಯ; ಬದುಕು ಬಂಗಾರ.

---

# ಪಾಂಡ್ಯದೇಶದ ವಿಷ್ಣುಕ್ಷೇತ್ರಗಳು

ತಮಿಳುನಾಡಿನಲ್ಲಿ ಅತ್ಯಂತ ಪ್ರಾಚೀನ ಪರಂಪರೆಯನ್ನೂ, ಐತಿಹಾಸಿಕ ದೃಷ್ಟಿಯನ್ನೂ ಪಡೆದಿರುವ ವಿಭಾಗವೆಂದರೆ ಮಧುರೈ–ರಾಮೇಶ್ವರಂ–ಕನ್ಯಾಕುಮಾರಿಗಳ ನಡುವೆ ಇರುವ, ಹಿಂದಿನಿಂದಲೂ ಹೆಸರು ಪಡೆದಿರುವ ಪಾಂಡ್ಯ ದೇಶ ಎನ್ನುವ ವಿಭಾಗ ವೈಗೈ, ತಾಮ್ರಪರ್ಣಿ ಇತ್ಯಾದಿ ಕಿರುನದಿಗಳೂ, ಬೆಟ್ಟಗುಡ್ಡಗಳೂ, ಅರಣ್ಯಗಳೂ ವಿದೇಶೀ, ವಿಧರ್ಮೀಯ ಧಾಳಿಯಿಂದ ದೂರವಾಗಿದ್ದವು. ಪ್ರಾಚೀನ ತಮಿಳು ಸಾಹಿತ್ಯವು ಉಳಿದು ಬರಲು ಇದೂ ಒಂದು ಕಾರಣವಾಗಿದೆ. ಈ ಪರಂಪರೆಯೇ ಇಲ್ಲಿ ಪ್ರಾಚೀನತೆಯನ್ನು ಉಳಿಸಿತು ಶೈವ ದೇವಾಲಯಗಳೊಂದಿಗೆ ವಿಷ್ಣು ದೇವಾಲಯಗಳೂ ನೆಲೆ ನಿಂತವು. ಮಧುರೈ ಮೀನಾಕ್ಷಿ, ರಾಮೇಶ್ವರದ ದೇವಾಲಯ ಕನ್ಯಾಕುಮಾರಿ ದೇವಾಲಯಗಳಿಗೆ ಸರಿಗಟ್ಟಲಾರದಾದರೂ, ಸಾಕಷ್ಟು ವಿಷ್ಣುಕ್ಷೇತ್ರಗಳು ಇಲ್ಲಿಯೂ ಕಂಡುಬರುತ್ತವೆ. ಇಲ್ಲಿ ಹದಿನೆಂಟು ವಿಷ್ಣು ದಿವ್ಯದೇಶಗಳಿವೆ ಇವು ಮಧುರೈ ಸುತ್ತಮುತ್ತ ಹಾಗೂ ತಿರುನಲ್ವೇಲಿ ಸುತ್ತಮುತ್ತ ಹರಡಿವೆ.

## ೧. ಮಧುರೈ ಸುತ್ತಮುತ್ತ

ಮಧುರೈಗೆ ಈಶಾನ್ಯದ ಕಡೆ ಹೆದ್ದಾರಿಯಲ್ಲಿ 12 ಮೈಲಿ ದೂರದಲ್ಲಿ ಕೊಂಡ ಅಡಿವಾರದಲ್ಲಿ 'ತಿರುಮಾಲಿರುಂ ಶೋಲೈ' ಎನ್ನುವ ದಿವ್ಯಕ್ಷೇತ್ರವಿದೆ. ನೂಪುರ ಗಂಗಾ ಎಂದು ಕರೆಯಲ್ಪಡುವ ನೂಪುರ ನದಿ ಉತ್ತರದಲ್ಲಿ ಬೆಟ್ಟದ ಮೇಲೆ ಮೂರು ಮೈಲಿ ದೂರದಲ್ಲಿದೆ. ಸನ್ನಿಧಿಯ ಸುತ್ತಲೂ ಅರಣ್ಯವಿರುವುದರಿಂದ ಸನ್ನಿಧಿಯಲ್ಲಿಯೆ ವಸತಿ ಮಾಡುವುದು ಒಳ್ಳೆಯದು ಮಧುರೈನಿಂದ ಇಲ್ಲಿಗೆ ಬಂದು ಹೋಗಲು ಬಸ್ಸುಗಳ ಅನುಕೂಲವಿದೆ ನೂಪುರ ನದಿಯಿಂದ ಅಂತರ್ಯದಲ್ಲಿ ಶುಭ್ರವಾದ ನೀರು ಹರಿದು ಬರುತ್ತದೆ ಆಲಯದ ಸುತ್ತಲೂ ಕೋಟೆಯಿದೆ. ಇದನ್ನು ಪಾಂಡ್ಯರಾಜನಾದ ಮಧುರೆಯ ತಿರುಮಲನಾಯಕನು ನಿರ್ಮಿಸಿದನು. ಈಗ ಸಾಕಷ್ಟು ಶಿಥಿಲವಾಗಿರುವ ಈ ಆಲಯಕ್ಕೆ ಈತನು ಅನೇಕ ಕೈಂಕರ್ಯಗಳನ್ನು ಮಾಡಿದ್ದಾನೆ. 'ದಕ್ಷಿಣ ತಿರುಪತಿ' ಎಂದು ಖ್ಯಾತಿ ಪಡೆದಿರುವ ಈ ಕ್ಷೇತ್ರಕ್ಕೆ ತಮ್ಮ ಪ್ರಾರ್ಥನೆಗಳನ್ನು ಸಲ್ಲಿಸಲು ಭಕ್ತಾದಿಗಳು ಬರುತ್ತಲೇ ಇರುತ್ತಾರೆ.

ಚಿತ್ರಾ ಪೌರ್ಣಮಿಯಂದು ಮಧುರೈನಿಂದ ವೈಗೈ ನದಿಗೆ ಬರುವ ಈ ಸ್ವಾಮಿಯ 'ನದಿ ಉತ್ಸವ'ವು ಜಗತ್ಪ್ರಸಿದ್ಧವಾದುದು. ನಮ್ಮಾಳ್ವಾರರ ಪಾಶುರಗಳು ಮತ್ತು ಕೂರತ್ತಾಳ್ವಾರರ ಸ್ತೋತ್ರಗಳಲ್ಲಿ ಈ ವೈಭವವನ್ನು ವಿಶೇಷವಾಗಿ ವಿವರಿಸಲಾಗಿದೆ. ಈ ಸ್ವಾಮಿ ಸನ್ನಿಧಿಯ ಗೋಪುರ ದ್ವಾರದ ಸೋಪಾನಗಳಲ್ಲಿ 18ನೇ ಸೋಪಾನಕ್ಕೆ 'ಕರುಪ್ಪಣ್ಣಸ್ ದ್ವೈವ' ಎಂದು ಕರೆಯುತ್ತಾರೆ. ಮಧುರೈನ ನಿವಾಸಿಗಳು ಇಲ್ಲಿಗೆ ಕರೆದು ತಂದು ಪ್ರಮಾಣ ಮಾಡಿಸುತ್ತಾರೆ ತಪ್ಪು ಪ್ರಮಾಣ ಮಾಡಿದವರು ತಕ್ಕ ಶಿಕ್ಷೆಯನ್ನು ಅನುಭವಿಸುವರು ಎಂಬ ನಂಬಿಕೆ ಉತ್ಸವದ ಸಮಯದಲ್ಲಿ ಚಕ್ರತ್ತಾಳ್ವಾರ್ ಮಾತ್ರ ಗೋಪುರ ದ್ವಾರದ ಮುಖಾಂತರ ಮತ್ತು ಸ್ವಾಮಿಯು ಪಕ್ಕದ ದ್ವಾರದ ಮುಖಾಂತರ ದಯಮಾಡಿಸುವರು. ಇಲ್ಲಿ ದೇವರಿಗೆ ನೈವೇದ್ಯಮಾಡುವ ದೋಸೆ ಬಹಳ ದೊಡ್ಡದು. ಸುಮಾರು ಮೂವತ್ತು ರೂಪಾಯಿ ಆಗಬಹುದು. ಇಲ್ಲಿರುವ ಪುಷ್ಕರಿಣಿಗೆ ಶರವಣ ಪೊಯ್‌ಗೈ ಎಂದು ಹೆಸರು

ಮಧುರೈ ಸ್ಟೇಷನ್ನಿನಿಂದ ಒಂದು ಮೈಲಿ ದೂರದಲ್ಲಿ 'ತಿರುಕ್ಕೂಡಲ್' ಎನ್ನುವ ದಿವ್ಯದೇಶವಿದೆ. ಕೂಡಲವಳಗರ್‌ರವರು ವಕುಳವಲ್ಲಿ, ವೀರಗುಣವಲ್ಲಿ, ಮರಕತವಲ್ಲಿ, ಮಧುರೈವಲ್ಲಿ ನಾಚ್ಚಿಯಾರ್‌ಗಳೊಡನೆ ದಯಮಾಡಿಸಿದ್ದಾರೆ ಅಷ್ಟಾಂಗ ವಿಮಾನ, ಚಕ್ರತೀರ್ಥ, ಹೇಮ ಪುಷ್ಕರಿಣಿಗಳಿಂದ ಕೂಡಿದ ಇಲ್ಲಿನ ಸ್ವಾಮಿಯನ್ನು ತಿರುಮಳಿಶೈ, ಪೆರಿಯಾಳ್ವಾರ್, ತಿರುಮಂಗೈ, ಆಂಡಾಳ್‌ರವರುಗಳು ಹಾಡಿ ಹೊಗಳಿದ್ದಾರೆ. ವೈಯಾಶಿ ತಿಂಗಳ ಪೌರ್ಣಮಿಯಂದು ತೀರ್ಥೋತ್ಸವ ಮತ್ತು ಮಾಶಿ ತಿಂಗಳಲ್ಲಿ ತೆಪ್ಪೋತ್ಸವಗಳು ನಡೆಯುತ್ತವೆ. ಈ ಸನ್ನಿಧಿಗೆ ಮೂರು ದೊಡ್ಡ ಪ್ರಾಕಾರಗಳಿವೆ. ಇಲ್ಲಿನ ಸ್ವಾಮಿಯ ಅಷ್ಟಾಂಗ ವಿಮಾನವು ಭಾರತದಲ್ಲೇ ಅತ್ಯಂತ ದೊಡ್ಡದ. ಇಲ್ಲಿನ ಮೀನಾಕ್ಷೀ ದೇವಾಲಯವೂ ಬಹಳ ದೊಡ್ಡದು. ತಿರುಮಲ ನಾಯ್ಕರ್ ಮಹಲ್, ತೆಪ್ಪ ಕೊಳಗಳು ಇಲ್ಲಿ ನೋಡಲು ಯೋಗ್ಯವಾದ ಇತರೆ ಪ್ರೇಕ್ಷಣೀಯ ಸ್ಥಳಗಳು. ಅನೇಕ ಶತಮಾನಗಳವರೆಗೆ ಈ ಮಧುರೈ ನಗರವು ದಕ್ಷಿಣಾಪಥದ ಪ್ರಧಾನ ನಗರವಾಗಿತ್ತು

---

'ರಘುಸುತ'

---

ಮಧುರೆಗೆ ಈಶಾನ್ಯದಲ್ಲಿ ರಾಜ್ಯ ಹೆದ್ದಾರಿಯಲ್ಲಿ ಏಳು ಮೈಲಿಗಳ ದೂರದಲ್ಲಿ 'ತಿರುಮೊಗೂರ್' ಎನ್ನುವ ವಿಷ್ಣುಕ್ಷೇತ್ರವಿದೆ. ಅಳಗರ್ ಸನ್ನಿಧಿ (ಕೋವಿಲ್) ಯಿಂದಲೂ ಇಲ್ಲಿಗೆ ಬರಬಹುದು. ಬಸ್‌ಗಳ ಅನುಕೂಲವಿದೆ; ಆದರೆ ಸತ್ರಗಳು ಊಟದ ಹೋಟೆಲುಗಳಿಲ್ಲ ಮೊಗೂರ್‌ವಲ್ಲಿ ನಾಚ್ಚಿಯಾರ್, ಮೇಘವಲ್ಲಿ ನಾಚ್ಚಿಯಾರ್, ಕೇತಕ ವಿಮಾನದಿಂದ ಕೂಡಿದ ಇಲ್ಲಿನ ಕಾಲಮೇಘಪ್ಪೆರುಮಾಳ್, ಅಜ ರುದ್ರ ಮತ್ತು ದೇವೇಂದ್ರರಿಗೆ ಪ್ರತ್ಯಕ್ಷನಾಗಿದ್ದಾನೆ. ನಮ್ಮಾಳ್ವಾರ್ ಮತ್ತು ತಿರುಮಂಗೈ ಆಳ್ವಾರ್‌ರವರುಗಳು ಮಂಗಳಾಶಾಸನ ಮಾಡಿದ್ದಾರೆ. ಅಮೃತವನ್ನು ಹಂಚುವ ನೆಪದಲ್ಲಿ ಮೋಹಿನೀ ಅವತಾರವನ್ನೆತ್ತಿದ ಶ್ರೀ ಮಹಾವಿಷ್ಣುವು ದೇವತೆಗಳ ಪ್ರಾರ್ಥನೆಯಂತೆ, ಕಾಲಮೇಘ ಅವತಾರದೊಂದಿಗೆ ಇಲ್ಲಿ ನೆಲೆಸಿರುವುದರಿಂದ ಈ ದಿವ್ಯದೇಶಕ್ಕೆ ಮೋಹನಪುರ ಅಥವಾ ಮೊಗೂರ್ ಎಂಬ ಹೆಸರು ಬಂದಿತು. ವೈಯ್ಯಾಶಿ ತಿಂಗಳಲ್ಲಿ ಇಲ್ಲಿ ತೀರ್ಥೋತ್ಸವವು ಜರುಗುತ್ತದೆ.

ತಿರುಚಿನಾಪಳ್ಳಿ – ಮಾನಾ ಮಧುರೈ ರೈಲು ಮಾರ್ಗದಲ್ಲಿನ ತಿರುಮೆಯ್ಯಂ ಸ್ಟೇಷನ್ನಿಗೆ ದಕ್ಷಿಣದಲ್ಲಿ 15 ಮೈಲಿ ದೂರದಲ್ಲಿ ತಿರುಪ್ಪತ್ತೂರ್ ಎಂಬ ಶಿವಕ್ಷೇತ್ರವಿದೆ ಇಲ್ಲಿಂದ ದಕ್ಷಿಣದಲ್ಲಿ ಆರು ಮೈಲಿ ದೂರದಲ್ಲಿ ತಿರುಕ್ಕೋಟ್ಟಿಯೂರ್' ಅಥವಾ 'ಗೋಷ್ಠೀಪುರಂ' ಎನ್ನುವ ವಿಷ್ಣುಕ್ಷೇತ್ರವಿದೆ. ಇಲ್ಲಿಗೆ ಮಧುರೈನಿಂದಲೂ, ಮಾನಾ ಮಧುರೈನಿಂದಲೂ ಹೋಗಬಹುದು. ಹಿಂದೆಯೆಲ್ಲ ಎರಡೆತ್ತಿನ ಗಾಡಿಗಳಲ್ಲಿ ಇಲ್ಲಿಗೆ ಹೋಗಬಹುದಾಗಿತ್ತು. ಈಗ ಪರಿಸ್ಥಿತಿ ಬದಲಾಗಿದೆ. ಛತ್ರಗಳು, ಭೋಜನ ಶಾಲೆಗಳು ಇಲ್ಲದ್ದರೂ, ತಿರುಪ್ಪತ್ತೂರ್, ಮಾನಾ ಮಧುರೈ ಹಾಗೂ ಶಿವಗಂಗೆಗಳಲ್ಲಿಯೂ ವಸತಿ ಮಾಡಬಹುದು. ಅಷ್ಟಾಂಗ ವಿಮಾನ ಹಾಗೂ ದೇವಪುಷ್ಕರಿಣಿಗಳಿಂದ ಕೂಡಿದ ಇಲ್ಲಿನ ಸನ್ನಿಧಿ

ಯಲ್ಲಿ ಸೌಮ್ಯನಾರಾಯಣ ಪ್ಪೆರುಮಾಳ್ ಮತ್ತು ತಿರುಮಾಮಗಳ್ ನಾಂಚಾರ್ ಇದ್ದಾರೆ. ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈ ಆಳ್ವಾರ್, ತಿರುಮಂಗೈ ಆಳ್ವಾರುಗಳು ಮಂಗಳಾಶಾಸನ ಮಾಡಿದ್ದಾರೆ. ಹಿರಣ್ಯಕಶಿಪುವಿನ ಕಾಟವನ್ನು ತಡೆಯಲಾರದೆ ದೇವತೆಗಳು ಕದಂಬ ಮುನಿಯ ಮಹಿಮೆಯಿಂದ ಆ ರಾಕ್ಷಸನು ಬರಲಸಾಧ್ಯಸ್ಥಳವಾದ ಈ ಕ್ಷೇತ್ರದಲ್ಲಿ (ಗೋಷ್ಟಿ) ಗುಂಪು ಕೂಡಿದ್ದ ಸ್ಥಳವಾದುದರಿಂದ ಇದಕ್ಕೆ ಗೋಷ್ಟೀಪುರ ಎಂಬ ಹೆಸರು ಬಂದಿತು. ಇಲ್ಲಿರುವ ಅರ್ಚಾ ವಿಗ್ರಹವು ಬೆಳ್ಳಿಯಿಂದ ಮಾಡಲ್ಪಟ್ಟಿರುವುದು ಇಲ್ಲಿನ ಮುಖ್ಯ ವಿಶೇಷ.

ಈ ಕ್ಷೇತ್ರವು ಐತಿಹಾಸಿಕವಾಗಿಯೂ ಪ್ರಮುಖವಾದುದು. ತಿರುಕ್ಕೋಟ್ಟಿಯೂರ್ ನಂಬಿಯವರು ಜನಿಸಿದ ಸ್ಥಳವಿದೇನೆ. ಶ್ರೀ ರಾಮಾನುಜರು 18 ಸಲ ಇಲ್ಲಿಗೆ ದಯ ಮಾಡಿಸಿ ನಂಬಿಯವರಿಂದ ತಿರುಮಂತ್ರಾರ್ಥವನ್ನು ಉಪದೇಶ ಹೊಂದಿ, ಸಕಲ ಚೇತನರನ್ನು ಉಜ್ಜೀವನಗೊಳಿಸಬೇಕೆಂಬ ಉದ್ದೇಶ್ಯದಿಂದ ಅಷ್ಟಾಂಗ ವಿಮಾನದ ದಾಮೋದರ ಗೋಪುರವನ್ನೇರಿ ತಿರುಮಂತ್ರವನ್ನು ಪ್ರಚುರಪಡಿಸಿದರು. ನಂಬಿ ಮತ್ತು ಉಡೈವರರಿಗೆ ಪ್ರತ್ಯೇಕ ಆಲಯಗಳಿವೆ.

ತಿರುಮೆಯ್ಯಂ ಸ್ಟೇಷನ್ನಿನಿಂದ ಅರ್ಧ ಮೈಲಿ ದೂರದಲ್ಲಿ 'ತಿರುಮೆಯ್ಯಂ' ಕ್ಷೇತ್ರವಿದೆ. ಇದು ಸಾಕಷ್ಟು ದೊಡ್ಡ ಊರು. ಸತ್ರ, ಊಟದ ಹೋಟೆಲುಗಳಿವೆ. ಸತ್ಯಗಿರಿನಾಥ, ಉಯ್ಯಾವಂದಾಳ್ ತಾಯಾರ್, ಸತ್ಯಗಿರಿ ವಿಮಾನ, ಕದಂಬ ಪುಷ್ಕರಿಣಿಗಳಿಂದ ಕೂಡಿದ ಈ ಕ್ಷೇತ್ರದ ಬಗ್ಗೆ ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ. ಇಲ್ಲಿನ ರಾಜನಾಗಿದ್ದ ಉಮೈಯ್ಯನ್‌ನು ಬಚ್ಚಿಟ್ಟುಕೊಂಡಿದ್ದ ಸ್ಥಳವು ನೋಡಲು ತಕ್ಕದ್ದಾದುದು. ಇದನ್ನು ಸತ್ಯಕ್ಷೇತ್ರ (ತಿರುಮೈಯ್ಯಂ) ಎಂದು ಕರೆಯುತ್ತಾರೆ. ಈ ಸನ್ನಿಧಿಯ ಪಕ್ಕದಲ್ಲಿ ಪ್ರಸಿದ್ಧವಾದ ಸತ್ಯಗಿರೀಶ್ವರನ ದೇವಾಲಯವಿದೆ.

ಮಧುರೈನಿಂದ ಆಗ್ನೇಯ ದಿಕ್ಕಿನಲ್ಲಿ ವೈಗೈ ನದಿಗೆ ಸಮಾನಾಂತರವಾಗಿರುವ ರೈಲುಮಾರ್ಗದಲ್ಲಿ ಪ್ರಯಾಣ ಮಾಡಿದರೆ ರಾಮನಾಥಪುರಂ (ರಾಮನಾಡು) ಸಿಗುತ್ತದೆ. ಇಲ್ಲಿಂದ ದಕ್ಷಿಣದ ಕಡೆ ಕಚ್ಚಾರಸ್ತೆಯಲ್ಲಿ ಆರು ಮೈಲಿ ದೂರ ಪ್ರಯಾಣ ಮಾಡಿದರೆ 'ತಿರುಪ್ಪುಲ್ಲಾಣಿ' ಎನ್ನುವ ದಿವ್ಯಕ್ಷೇತ್ರವಿದೆ. ಇದೇ ಈಗ ಅತ್ಯಂತ ಖ್ಯಾತವಾಗಿ, ಪ್ರವಾಸೋದ್ಯಮ ಕೇಂದ್ರವಾಗಿರುವ 'ದರ್ಭಶಯನ'. ಇಲ್ಲಿಂದ ದಕ್ಷಿಣಕ್ಕೆ ಮೂರು ಮೈಲಿ ದೂರದಲ್ಲಿ ಆದಿಸೇತು ಸಮುದ್ರ ಸ್ನಾನ ಘಟ್ಟವಿದೆ. ಸೇತುಸ್ನಾನವನ್ನು ಮಾಡಿದವರು ಸರ್ವ ಪಾಪ ವಿಮುಕ್ತರಾಗುತ್ತಾರೆಂದು ನಂಬಿಕೆ. ಕಲ್ಯಾಣ ಜಗನ್ನಾಥ, ದೇವ ಶಿಲೈಯರ್, ಕಲ್ಯಾಣವಲ್ಲಿ ನಾಚ್ಚಾರು, ಕಲ್ಯಾಣ ವಿಮಾನ, ಹೇಮತೀರ್ಥ, ಚಕ್ರತೀರ್ಥಗಳಿಂದ ಕೂಡಿರುವ ಈ ಕ್ಷೇತ್ರದಲ್ಲಿ ಶ್ರೀರಾಮನು ಸಮುದ್ರರಾಜನಿಗೆ ವರವನ್ನು ನೀಡಿದ. ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ. ಸನ್ನಿಧಿಯಲ್ಲಿ ದೊಡ್ಡದಾದ ಅಶ್ವತ್ಥ ವೃಕ್ಷವಿದ್ದು, ಅಲ್ಲಿ ನಾಗರ ಪ್ರತಿಷ್ಠೆ ಮಾಡಿದವರಿಗೆ ತಪ್ಪದೆ ಸಂತಾನಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆಯಿದೆ. ಇಲ್ಲಿರುವ ತರಹದ ನಾಗಪ್ರತಿಷ್ಠೆ ಬೇರೆಲ್ಲೂ ಇಲ್ಲ. ಈ ಸನ್ನಿಧಿಯಲ್ಲಿ ದೇವಗಣಗಳ ಸಹಿತ, ಪತ್ನೀಸಮೇತನಾಗಿ ನಿಂತಿರುವ ಸಮುದ್ರರಾಜ ಹಾಗೂ ವಿಭೀಷಣರವರುಗಳು ದರ್ಭೆಯ ಮೇಲೆ ಶಯನಿಸಿರುವ ಶ್ರೀರಾಮನನ್ನು ಸೇವಿಸುತ್ತಿರುವರು.

ಮಧುರೈನಿಂದ ತೇನ್‌ಕಾಶಿಯ ಕಡೆಯಲ್ಲಿರುವ ಶಿವಕಾಶಿ ಸ್ಟೇಷನ್ನಿಗೆ ಉತ್ತರದಲ್ಲಿ ಎರಡು ಮೈಲಿ ದೂರದಲ್ಲಿ 'ತಿರುತ್ತಂಗಾಲ್' ಅಥವಾ 'ತಿರುತ್ತಂಗಾಲೂರ್' ಕ್ಷೇತ್ರವಿದೆ. ಸನ್ನಿಧಿಯಲ್ಲಿ ಪ್ರಸಾದ ದೊರೆಯುತ್ತದೆ. ರಾಮಾನುಜ ಕೂಟ ಮತ್ತು ಸತ್ರಗಳು ಇವೆ. ಶ್ರೀಕೃಷ್ಣನು ಬಾಣಾಸುರನನ್ನು ಜಯಿಸಿ, ಅನಿರುದ್ಧನಿಗೂ ಉಷೆಗೂ ಮದುವೆ ಮಾಡಿಸಿದ ಸ್ಥಳವಿದು– ಎಂದು ನಂಬಲಾಗಿದೆ ಇಲ್ಲಿರುವ ಪೆರಿಯ ತಿರುವಡಿ (ಗರುಡಾಳ್ವಾರ್) ಅಂಜಲೀ ಬದ್ಧನಾಗಿ ಸರ್ಪ ಮತ್ತು ಅಮೃತ ಕಳಶಗಳೊಂದಿಗೆ ಕೂಡಿದ ಎರಡು ಹಸ್ತಗಳು ಇರುವಿಕೆಯು ನೋಡುವವರಿಗೆ ವಿಸ್ಮಯವನ್ನು ಉಂಟುಮಾಡುತ್ತದೆ. ಅಪ್ಪನ್, ತಂಗೌಲಪ್ಪನ್, ಅನ್ನ ನಾಯಕಿ, ಅನಂತ ನಾಯಕಿ, ನಾಲ್ವರು ನಾಚ್ಚಿಯಾರರಿಂದ ಕೂಡಿದ ಈ ಕ್ಷೇತ್ರವನ್ನು ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ.

ಶಿವಕಾಶಿಯ ಪಶ್ಚಿಮದಲ್ಲಿ 'ಶ್ರೀವಿಲ್ಲಿಪುತ್ತೂರ್' ಎನ್ನುವ ಖ್ಯಾತ ಕ್ಷೇತ್ರವಿದೆ. ಪೆರಿಯಾಳ್ವಾರ್, ಆಂಡಾಳ್‌ರವರು ಸೇವೆಗೈದ ಪವಿತ್ರ ಕ್ಷೇತ್ರವಿದು. ವಿಲ್ಲಿ ಎನ್ನುವ ಚೆಂಚುರಾಜನು ಇದನ್ನು ಕಟ್ಟಿಸಿದ್ದರಿಂದ ಇದಕ್ಕೆ ಶ್ರೀವಿಲ್ಲಿಪುತ್ತೂರ್ ಎನ್ನುವ ಹೆಸರು ಬಂದಿತು. ಆನಿ ತಿಂಗಳಲ್ಲಿ ಪೆರಿಯಾಳ್ವಾರ್‌ಗೆ, ಆಡಿ ಮಾಸದಲ್ಲಿ ಆಂಡಾಳ್‌ಗೆ, ಪೆರಟಾಶಿ ತಿಂಗಳಲ್ಲಿ ವಟಪತ್ರ ಶಾಯಿಗೆ ಉತ್ಸವಗಳು ಜರುಗುವುವು. ಮಾರ್ಗಳಿ ಮಾಸದಿಂದ ಒಂದು ತಿಂಗಳವರೆಗೆ

## ತಂದೆ ಕಾಯೋ

ಭೋಗದಾಸೆಯ ಬಿಡಿಸಯ್ಯಾ । ಮುಳ
ಬಾಗಿಲ ಯೋಗಾನರಸಿಂಹ ॥ ಪ ॥

ತರಳ ಪ್ರಹ್ಲಾದನ ನುಡಿಯ ಲಾಲಿಸಿ
ಬೆರಳ ತೋರಿದ ಕಂಬದಲಿ ಬಂದು
ಕರುಳ ಮಾಲೆಯ ಬಗೆದು ಅರ್ಭಟಿಸುತಲಿ
ಕೊರಳಲಿ ಧರಿಸಿ ನಿಂತಿಹ ಯೋಗಾನರಸಿಂಹ ॥ 1 ॥

ಸೃಷ್ಟಿಸ್ಥಿತಿಲಯ ಕಾರಣನು ನೀನಹುದು
ಕಷ್ಟಕಾರ್ಪಣ್ಯಗಳ ತೊಡೆದು ಕಾಪಾಡು
ಇಷ್ಟವರಗಳ ನೀಡಿ ದಯ ತೋರು
ದಿಟ್ಟ ಮೂರುತಿ ಯೋಗಾನರಸಿಂಹ ॥ 2 ॥

ಹಿಂದೆನಿತೊ ಜನುಮಗಳಲಿ ನೊಂದೆ
ಮುಂದೆನಿತು ಜನುಮಗಳೋ ನಾಕಾಣೆ
ಹಿಂದೆ ಮುಂದೆ ಎಂದಿಗೂ ನೀನೆ ಗತಿ
ತಂದೆ ಕಾಯೋ ನಮ್ಮ ಯೋಗಾನರಸಿಂಹ ॥ 3 ॥

- ಶ್ರೀನಿವಾಸಮಠದ

ನಡೆಯುವ ಆಂಡಾಳ್ ದೇವಿಯ ನೀರಾಟ್ಟದ ಉತ್ಸವ ಮತ್ತು ಪಂಗುನಿ ಮಾಸದಲ್ಲಿ ಆಂಡಾಳ್‌ಗೆ ನಡೆಯುವ ತಿರುಕ್ಕಲ್ಯಾಣ ಮಹೋತ್ಸವಗಳು ನೋಡಲು ರಮ್ಯವಾಗಿವೆ. ಆಡಿ ಉತ್ಸವಗಳಲ್ಲಿ ಐದನೆಯ ದಿನ ಉದಯದಲ್ಲಿ ರಂಗಮನ್ನಾರ್, ವಟಪತ್ರಶಾಯಿ, ತಿರುತ್ತಂಗಾಲಪ್ಪನ್, ಶ್ರೀನಿವಾಸ, ಕಾಟ್ಟಳಗರ್–ರವರುಗಳು ದಯ ಮಾಡಿಸಿದಾಗ ಪೆರಿಯಾಳ್ವಾರ್‌ರವರು ಎದುರುಗೊಂಡು ಮಂಗಳಾಶಾಸನ ಮಾಡುವ ಮಹೋತ್ಸವವೂ ಅಂದು ರಾತ್ರಿ ಹಂಸವಾಹನದೊಂದಿಗೆ ಆಂಡಾಳ್ ಎದುರುಗೊಂಡು ನಂತರ ಅವರೊಂದಿಗೆ ತಿರುವೀದಿಗಳಲ್ಲಿ ದಯಮಾಡಿಸುವ ಮಹೋತ್ಸವವೂ ಕಣ್ಣಿಗೆ ಹಬ್ಬವಾಗಿದ್ದು ನೋಡಿ, ಸೇವಿಸುವವರಿಗೆ ಆಹ್ಲಾದವನ್ನು ಉಂಟು ಮಾಡುತ್ತವೆ

## ೨. ತಿರುನಲ್ವೇಲಿ ಸುತ್ತಮುತ್ತ

ಅತಿಯಾದ ಉಷ್ಣಾಂಶ, ಅತಿಯಾದ ಮಳೆ, ತಾಮ್ರಪರ್ಣಿನದಿ – ಈ ಲಕ್ಷಣಗಳಿಂದ ಕೂಡಿದ ತಿರುನಲ್ವೇಲಿಯ ಸುತ್ತಮುತ್ತಲಲ್ಲಿ ಕೆಲವು ಪ್ರಮುಖ ವಿಷ್ಣು ಕ್ಷೇತ್ರಗಳಿರುವುದು ಗಮನಾರ್ಹ. ಇಲ್ಲಿನ ಹತ್ತು ಕ್ಷೇತ್ರಗಳಲ್ಲಿ ಎಂಟು ತಾಮ್ರಪರ್ಣಿ ನದಿಯ ಉತ್ತರದಲ್ಲಿದ್ದು, ಉಳಿದದ್ದು ದಕ್ಷಿಣದಲ್ಲಿವೆ.

ಇವುಗಳಲ್ಲಿ 'ಆಳ್ವಾರ್ ತಿರುನಗರಿ' ಪ್ರಮುಖವಾದುದು. ಇದರ ಸುತ್ತಲೂ ನವ ತಿರುಪತಿಗಳಿವೆ. ಇಲ್ಲಿನ ಆದಿನಾಥಪ್ಪೆರುಮಾಳ್‌ಗೆ ಪೊಲಿನ್ದುನಿಂದ್ರ ಪಿರಾನ್, ಆದಿನಾಥವಲ್ಲಿ ತಾಯಾರ್‌ಗಳಿದ್ದು, ಬ್ರಹ್ಮ, ನಮ್ಮಾಳ್ವಾರ್ ಮಂಗಳಾಶಾಸನ ಮಾಡಿದ್ದಾರೆ. ಇದರ ಬಳಿಯಲ್ಲಿ ಅಪ್ಪನ್ ಕೋಯಿಲ್ ಎನ್ನುವ ನಮ್ಮಾಳ್ವಾರ್ ಅವತರಿಸಿದ ದಿವ್ಯದೇಶವಿದೆ. ಆದಿಶೇಷಾಂಶವಾಗಿ ಇವರು ಉದ್ಭವಿಸಿದ ತಿರುಪ್ಪುಳಿಯಾಳ್ವಾರ್ (ಹುಣಿಸೇ ಮರ) ಕೆಳಗೆ ಇವರು ಚಿತ್ರರೂಪದಲ್ಲಿ ದಯ ಮಾಡಿಸಿದ್ದಾರೆ. ವೈಯಾಸಿ ತಿಂಗಳಲ್ಲಿ ಇಲ್ಲಿ ಈ ಆಳ್ವಾರರಿಗೆ ಅತಿವೈಭವದ ಉತ್ಸವಗಳು ಜರುಗುತ್ತವೆ. ಐದನೆ ದಿನದ ಉದಯದಲ್ಲಿ ನವ ತಿರುಪತಿಗಳ ದೇವರುಗಳ ಇಲ್ಲಿಗೆ ದಯಮಾಡಿಸಿ, ತಿರು–ಮಂಜನ ಹಾಗೂ ತಿರುವಾರಾಧನಗಳನ್ನು ನಡೆಯಿಸಿಕೊಳ್ಳುವರು. ಅಂದು ರಾತ್ರಿ 11 ಗಂಟೆಗೆ ಈ ದೇವರುಗಳು ಗರುಡಾರೂಢರಾಗಿ ದಯ ಮಾಡಿಸಲು ಹಂಸವಾಹನಾರೂಢರಾದ ಆಳ್ವಾರರು ಪ್ರತ್ಯೇಕವಾಗಿ ಒಬ್ಬೊಬ್ಬ ದೇವರಿಗೂ ಮಂಗಳಾಶಾಸನ ಮಾಡಿ, ನಂತರ ಎದುರು ಸೇವೆಯೊಂದಿಗೆ ತಿರುವೀಧಿಗಳಲ್ಲಿ ಅಮಿತ ವೈಭವದಿಂದ ಮೆರವಣಿಗೆಯಲ್ಲಿ ದಯ ಮಾಡಿಸುವರು. ಈ ಮಹೋತ್ಸವವನ್ನು ಸೇವಿಸುವವರ ಕಣ್ಣುಗಳು ಆನಂದ ಪೂರಿತವಾಗುವುವು. ಎಂಟನೆಯ ದಿನ ಆಳ್ವಾರರು ಕೃಷ್ಣನ ವೇಷದಲ್ಲಿ ದಯಮಾಡಿಸಿ, ಅಪ್ಪನ್ ಸನ್ನಿಧಿಯಲ್ಲಿ ಸೇವೆ ಮಾಡುವ ದೃಶ್ಯ ಅದ್ಭುತವಾಗಿರುವುದು. ಈ ಕ್ಷೇತ್ರಕ್ಕೆ ತಿರುಕ್ಕುರು–ಹೂರ್ ಎನ್ನುವ ಹೆಸರು.

ಆಳ್ವಾರ್ ತಿರುನಗರಿ ಸ್ಟೇಷನ್ನಿಗೆ ಪೂರ್ವದಲ್ಲಿ ತಾಮ್ರಪರ್ಣಿ ನದಿಯ ಉತ್ತರದಲ್ಲಿ 'ತಿರುತ್ತೊಲೈವಿಲ್ಲಿ ಮಂಗಲಂ' ಅಥವಾ 'ರೆಟ್ಟೈ ತಿರುಪತಿ' ಎನ್ನುವ ಕ್ಷೇತ್ರವಿದೆ. ವಾಹನ ಸಂಚಾರದ ಅನುಕೂಲ ಕಡಿಮೆ. ದೇವ ಪಿರಾನ್, ಅರವಿಂದ ಲೋಚನ, ಕರುತ್ತಡಕ್ಕಣಿನಾಚ್ಚಿಯಾರ್ ಇರುವ ಈ ಕ್ಷೇತ್ರದಲ್ಲಿ ನಮ್ಮಾಳ್ವಾರರು ಮಂಗಳಾ ಶಾಸನ ಮಾಡಿದ್ದಾರೆ. ಇಂದ್ರ, ವಾಯು, ವರುಣನಿಗೆ ಈ ದೇವರು ಪ್ರತ್ಯಕ್ಷ.

ಆಳ್ವಾರ್ ತಿರುನಗರಿಗೆ ಉತ್ತರದಲ್ಲಿ, ತಾಮ್ರಪರ್ಣಿ ನದಿತೀರದಲ್ಲಿ 'ಶ್ರೀ ವೈಕುಂಠಂ' ಎನ್ನುವ ಕ್ಷೇತ್ರವಿದೆ. ಸತ್ರಗಳು, ಭೋಜನಶಾಲೆಗಳು ಇವೆ. ಕಳ್ಳಪಿರಾನ್, ವೈಕುಂಠನಾಥನಾಗಿರುವ ಈ ದೇವರಿಗೆ ವೈಕುಂಠವಲ್ಲಿ ನಾಚ್ಚಿಯಾರ್ ಇದ್ದು, ಇಂದ್ರ ಭೃಗು ಚಕ್ರವರ್ತಿಗಳಿಗೆ ಪ್ರತ್ಯಕ್ಷನಾಗಿ, ನಮ್ಮಾಳ್ವಾರರಿಂದ ಮಂಗಳಾಶಾಸನವನ್ನು ಮಾಡಿಸಿಕೊಂಡಿದ್ದಾನೆ.

'ವರಗುಣ ಮಂಗೈ' ಎನ್ನುವ ವಿಷ್ಣು ಕ್ಷೇತ್ರವು ಶ್ರೀ ವೈಕುಂಠಕ್ಕೆ ಪೂರ್ವದಲ್ಲಿ ಒಂದು ಮೈಲು ದೂರದಲ್ಲಿದೆ. ಸುತ್ತ ಮುತ್ತ ಕಾಡು, ತಿರುವಾರಾಧನ ಸಮಯದಲ್ಲಿ ಮಾತ್ರ ಸೇವಿಸಬೇಕು. ಬೇರೆ ಸಮಯದಲ್ಲಿ ಸನ್ನಿಧಿಯ ಬಾಗಿಲುಗಳು ಮುಚ್ಚಿರುತ್ತವೆ. ಇಲ್ಲಿಯ ವಿಜಯಾಸನನು ವರಗುಣವಲ್ಲಿ ನಾಚ್ಚಿಯಾರ್‌ಳನ್ನು ಹೊಂದಿದ್ದು, ನಮ್ಮಾಳ್ವಾರರಿಂದ ಮಂಗಳಾಶಾಸನವನ್ನು ಪಡೆದಿದ್ದಾನೆ

ವರಗುಣ ಮಂಗೈಗೆ ಪೂರ್ವದಲ್ಲಿ ಒಂದು ಮೈಲಿ ದೂರದಲ್ಲಿ 'ತಿರುಪುಳಿಂಗುಡಿ' ಎನ್ನುವ ಕ್ಷೇತ್ರವಿದೆ. ಉಳಿದುಕೊಳ್ಳುವ ಯಾವ ಅನುಕೂಲವೂ ಇಲ್ಲ. ಎತ್ತಿನಗಾಡಿಯೇ ಅನುಕೂಲ. ಬ್ರಾಹ್ಮಣರು ಮಾತ್ರ ಇಲ್ಲಿನ ದೇವರನ್ನು ಸೇವಿಸಬಹುದು. ಇತರರು ವಿಮಾನಕ್ಕೆ ಹೊರಗಡೆಯಿಂದ ಚಿಕ್ಕ ದ್ವಾರವೊಂದರ ಮುಖಾಂತರ ಸೇವಿಸಬೇಕು. ಭುಜಂಗ ಶಯನನಾದ ಇಲ್ಲಿನ ಕಾಯ್ಚಿನ್‌ವೇಂದಪೆರುಮಾಳ್‌ಗೆ ಮಲರ್ ಮಗಳ್ ನಾಚ್ಚಿಯಾರ್ ಮತ್ತು ಪುಳಿಂಗುಡಿವಲ್ಲಿ ನಾಚ್ಚಿಯಾರ್‌ರವರುಗಳು ಇದ್ದಾರೆ. ವೇದಸಾರ ವಿಮಾನ, ವರುಣ ತೀರ್ಥ, ನಿರುತಿ ತೀರ್ಥಗಳನ್ನು ಹೊಂದಿರುವ ಈ ಕ್ಷೇತ್ರವನ್ನು ನಮ್ಮಾಳ್ವಾರ್‌ರವರು ಮಂಗಳಾಶಾಸನ ಮಾಡಿ ಪ್ರಶಂಸಿಸಿದ್ದಾರೆ

ಶ್ರೀವೈಕುಂಠಂ ಸ್ಟೇಷನ್ನಿಗೆ ಉತ್ತರದಲ್ಲಿ ಏಳು ಮೈಲಿ ದೂರದಲ್ಲಿ 'ತಿರುಕ್ಕುಳಂದೈ' ಕ್ಷೇತ್ರವಿದೆ. ಇದನ್ನು 'ಪೆರುಂಗುಳಂ' ಎಂದೂ, 'ತನ್‌ಕುಳಂದೈ' ಎಂದೂ ಕರೆಯುತ್ತಾರೆ. ಇಲ್ಲಿ ಇಳಿದುಕೊಳ್ಳುವ ಯಾವ ಅನುಕೂಲವೂ ಇಲ್ಲ. ಸನ್ನಿಧಿಯ ಪ್ರಸಾದ ಸಿಕ್ಕರೆ ಗಟ್ಟಿ. ನಮ್ಮಾಳ್ವಾರರು ಮಂಗಳಾ ಶಾಸನ ಮಾಡಿರುವ ಇಲ್ಲಿನ ಮಾಯಾ ಕೂತ್ತಪ್ಪೆರುರಾಳ್‌ಗೆ ಕುಳಂದೈವಲ್ಲಿ ನಾಚ್ಚಿಯಾರ್ ಇದ್ದು, ಆನಂದನಿಲಯ ವಿಮಾನ ಮತ್ತು ಪೆರುಂಕುಳ ತೀರ್ಥಗಳನ್ನು ಹೊಂದಿದ್ದು ಬೃಹಸ್ಪತಿಗೆ ಪ್ರತ್ಯಕ್ಷನಾಗಿದ್ದಾನೆ.

ಆಳ್ವರ್ ತಿರುನಗರಿ ಸ್ಟೇಷನ್ನಿಗೆ ಆಗ್ನೇಯದಲ್ಲಿ ಮೂರು ಮೈಲಿ ದೂರದಲ್ಲಿರುವ ರಟ್ಟೆ ತಿರುಪತಿಗೆ ದಕ್ಷಿಣದಲ್ಲಿ ಒಂದು ಮೈಲಿ ದೂರದಲ್ಲಿ 'ತಿರುಪ್ಪೇರೈ' ಎನ್ನುವ ದಿವ್ಯ ದೇಶವಿದೆ. ಪಂಗುನಿ ಮಾಸದಲ್ಲಿ ಹತ್ತು ದಿನಗಳ ಬ್ರಹ್ಮೋತ್ಸವವು ಜರುಗುವದು. ನಿಗರಿಲ್ ಮುಗಿಲ್ವಣ್ಣನ್ ಎಂದು ಕರೆಯಲ್ಪಡುವ ಇಲ್ಲಿನ ಮಕರ ನೆಡುಂಗುಳೈಕಾತ್ತಪ್ಪೆರುಮಾಳ್‌ರವರು ಕುಳೈಕ್ಕಾದುವಲ್ಲಿ ನಾಚ್ಚಿಯಾರ್, ಭದ್ರ ವಿಮಾನ, ಶುಕ್ರಪುಷ್ಕರಣಿಯನ್ನು ಹೊಂದಿದ್ದು ನಮ್ಮಾಳ್ವಾರ್‌ರಿಂದ ಮಂಗಳಾಶಾಸನವನ್ನು ಪಡೆದಿದ್ದಾರೆ.

ಈ ತಿರುಪ್ಪೇರೈನಿಂದ ಎರಡು ಮೈಲಿಗಳ ದೂರದಲ್ಲಿ 'ತಿರುಕ್ಕೋಳೂರ್' ಎನ್ನುವ ದಿವ್ಯ ದೇಶವಿದೆ. ನವನಿಧಿಗಳು ಇಲ್ಲಿ ಬಚ್ಚಿಡಲಾಗಿದೆಯೆಂದು ಅಥರ್ವನು ಕುಬೇರನಿಗೆ ಚಾಡಿ ಹೇಳಿದ್ದರಿಂದ ಈ ಸ್ಥಳಕ್ಕೆ ಕೋಳೂರು ಎಂಬ ಹೆಸರು ಬಂದಿತು ಬ್ರಾಹ್ಮಣರಲ್ಲದವರಿಗೆ ಇಲ್ಲಿ ಸೇವೆಯ ಲಭ್ಯ ಅಷ್ಟು ಸುಲಭವಲ್ಲ

ತಾಮ್ರ ಪರ್ಣಿ ನದಿಗೆ ದಕ್ಷಿಣದಲ್ಲಿ ಶ್ರೀವರ ಮಂಗೈ ಮತ್ತು ತಿರುಕ್ಕುರುಂಗುಡಿ ಎನ್ನುವ ಎರಡು ಕ್ಷೇತ್ರಗಳಿವೆ.

ತಿರುನಲ್ವೇಲಿಗೆ ದಕ್ಷಿಣದಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಇಪ್ಪತ್ತು ಮೈಲಿಗಳ ದೂರದಲ್ಲಿ 'ಶ್ರೀ ವರ ಮಂಗೈ' ಕ್ಷೇತ್ರವಿದೆ. ಇದನ್ನು ನಾಂಗುನೇರಿ ಅಥವಾ ವಾನಮಾಮಲೈ ಎಂದೂ ಕರೆಯುತ್ತಾರೆ ಸಾಕಷ್ಟು ದೊಡ್ಡ ಊರಾದುದರಿಂದ ಎಲ್ಲ ಅನುಕೂಲಗಳೂ ಇವೆ. ಇಲ್ಲಿಗೆ ದಯಮಾಡಿಸಿದ ತಾಯಾರ್‌ರವರ ಶ್ರೀವರಮಂಗೈ ಎನ್ನುವ ತಿರುನಾಮವನ್ನು ಈ ದಿವ್ಯದೇಶಕ್ಕೆ ಇಡಲಾಯಿತು ಈ ಸನ್ನಿಧಿಯಲ್ಲಿನ ದೇವರನ್ನು ಭೂಮಿಯಿಂದ ಎತ್ತುವಾಗ ದೇಹದ ಮೇಲೆ ಗಾಯವಾದುದರ ಪರಿಣಾಮವಾಗಿ, ಪ್ರತಿದಿನ ಎಣ್ಣೆ ಹಚ್ಚಿ ತಿರುಮಂಜನವನ್ನು ಮಾಡಿಸುವರು. ಈ ದಿವ್ಯದೇಶದಲ್ಲಿ ಭಗವದ್ರಾಮಾನುಜ ಸಿದ್ಧಾಂತ ಪ್ರವರ್ತಕರಾದ ವಾನಮಾಮಲೈ ಜೀಯರ್‌ರವರ ಪ್ರಧಾನ ಮಠವಿದೆ. ಇಲ್ಲಿರುವ ತೇನಮಾಂ ಪೊಳಿಲ್

ಎನ್ನುವ ಸುಂದರವನ ಮತ್ತು ದೇವರ ಸ್ವರ್ಣ ಗೋರಥವು ನೋಡತಕ್ಕದ್ದಾಗಿದೆ. ನಮ್ಮಾಳ್ವಾರ್ ಮಂಗಳಾಶಾಸನ ಮಾಡಿರುವ, ಶ್ರೀವರಮಂಗೈ ನಾಚ್ಚಿಯಾರ್ ನಂದಕವರ್ಧ ವಿಮಾನಗಳನ್ನು ಹೊಂದಿರುವ ಇಲ್ಲಿನ ವಾನಮಾಮಲೈಪ್ಪೆರುಮಾಳ್ ನೋಡಲು ಸುಂದರ

ವಾನಮಾಮಲೈನಿಂದ ನೈಋತ್ಯದಿಕ್ಕಿಗೆ ಎಂಟು ಮೈಲಿ ದೂರದಲ್ಲಿ 'ತಿರುಕ್ಕುರುಂಗುಡಿ ಎನ್ನುವ ಕ್ಷೇತ್ರವಿದೆ. ತಿರುನಲ್ವೇಲಿಯಿಂದಲೂ ಇಲ್ಲಿಗೆ ಬರಬಹುದು. ಇಲ್ಲಿಗೆ ಪಶ್ಚಿಮದಲ್ಲಿ ಆರುಮೈಲಿ ದೂರದಲ್ಲಿ ಬೆಟ್ಟದ ಮೇಲೆ ನಂಬಿ ಸನ್ನಿಧಿ ಇದೆ ವಾಮನನು ದಯಮಾಡಿಸಿರುವ ಸ್ಥಳವಾದುದರಿಂದ ಈ ಸ್ಥಳಕ್ಕೆ 'ಕುರುಂಗುಡಿ' ಎಂಬ ಹೆಸರು ಬಂದಿತು ವಡುಗನಂಬಿ ರೂಪದಿಂದ ಈ ಸನ್ನಿಧಿಯ ಪಡಿ ವಳಿಗಿಯ ನಂಬಿಯು ಇಲ್ಲಿದ್ದ ಉಡೈವರರನ್ನು ಆಶ್ರಯಿಸಿ, ಮಂತ್ರೋಪದೇಶವನ್ನು ಹೊಂದಿ, 'ಶ್ರೀ ವೈಷ್ಣವನಂಬಿ' ಎನ್ನುವ ದಾಸ್ಯ ನಾಮವನ್ನು ಹೊಂದಿದರು. ಶ್ರೀ ಭಾಷ್ಯಕಾರರ ಕಾಷಾಯ ವಸ್ತ್ರಗಳನ್ನು ಒಣಗಿ ಹಾಕುತ್ತಿದ್ದ ಸ್ಥಳವನ್ನು ಈಗಲೂ ತಿರುಪಟ್ಟಪಾರೈ ಎಂದು ಕರೆಯುತ್ತಾರೆ. ಇಲ್ಲಿ ಉಡೈವರರು ಆಚಾರ್ಯ ಸ್ಥಾನದಲ್ಲಿದ್ದು, ಮಂತ್ರೋಪದೇಶ ಮಾಡುವುದರಿಂದ ಇಲ್ಲಿನ ರಾಮಾನುಜ ವಿಗ್ರಹವು ಚಿನ್ಮುದ್ರ ರೂಪದಲ್ಲಿದೆ. ತಿರುಮಂಗೈ ಆಳ್ವಾರರು ತಿರುನಾಡನ್ನು ಅಲಂಕರಿಸಿದ ಸ್ಥಳವಿದೇನೆ. ಇಲ್ಲಿನ ನಿಂಡ್ರ ನಂಬಿ, ಕಿಡಂದನಂಬಿ ಸನ್ನಿಧಿಗಳ ನಡುವೆ ಶಿವನ ಆಲಯವಿದೆ. ಇಲ್ಲಿನ ದೇವರ ಉತ್ಸವ ಹೊರಡುವುದಕ್ಕೆ ಮುಂಚೆ, ಆಲಯಗಳ ಪ್ರದಕ್ಷಿಣೆ ಮಾಡುವಾಗ, ಶಿವನ ಆಲಯದ ಎದುರು ನಿಂತ 'ನಮ್ಮ ಪಕ್ಕದಲ್ಲಿರುವ ಶಿವನಿಗೆ ಏನಾದರೂ ಕೊರತೆ ಇದೆಯೆ ?' ಎಂದು ಕೇಳಲು, 'ಕೊರತೆಯೇನೂ ಇಲ್ಲ!' ಎಂದು ಶಿವನ ಉತ್ತರ ಸಿಕ್ಕಿದ ಮೇಲೆ ತಿರುವೀದಿಗಳಲ್ಲಿ ಉತ್ಸವ ಹೊರಡುವುದು ವೈಷ್ಣವ ನಂಬಿ, ಮಲೈ ನಂಬಿ, ತಿರುಪ್ಪಾರ್ ಕಂಡಲ್ ನಂಬಿ, ಕುರುಂಗುಡಿ ವಲ್ಲಿ ನಾಚ್ಚಾರ್, ಪಂಚಕೇತಕ ವಿಮಾನದಿಂದ ಕೂಡಿದ ಈ ದಿವ್ಯದೇಶವನ್ನು ನಮ್ಮಾಳ್ವಾರ್, ಪೆರಿಯಾಳ್ವಾರ್, ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿ ಹಾಡಿ ಹೊಗಳಿದ್ದಾರೆ.



ಪ್ರಾಚೀನ ಕಾಲದಿಂದ ತಿರುಪತಿ ತಿರುಮಲೆ ಕ್ಷೇತ್ರಗಳು ಮತಾಚಾರ್ಯರನ್ನು, ಗಾಯಕರನ್ನು, ಭಕ್ತರನ್ನು ವಿಶೇಷವಾಗಿ ಆಕರ್ಷಿಸಿವೆ. ಅದ್ವೈತಮತ ಸ್ಥಾಪಕರಾದ ಶಂಕರಾಚಾರ್ಯರು ತಿರುಮಲೆಗೆ ಒಂದು ಶ್ರೀಚಕ್ರವನ್ನು ಪ್ರತಿಷ್ಠಿಸಿದರೆಂದು ಐತಿಹ್ಯ. ಆದ್ದರಿಂದ ಅಲ್ಲಿ ಕಾಣಿಕೆಗಳು ಜಾಸ್ತಿಯಾಗಿ ಸೇರುತ್ತವೆ. ವಿಶಿಷ್ಟಾದ್ವೈತ ಮತಸ್ಥಾಪಕರಾದ ರಾಮಾನುಜಾಚಾರ್ಯರು ತಿರುಮಲೆಗೆ ಒಂದು ಶಿವಕೇಶವ ಭೇದವನ್ನು ಸಂಹರಿಸಿ ಪೂಜಾಕಾರ್ಯ ಕ್ರಮಗಳನ್ನು ಸುಧಾರಿಸಿದರು. ಮಧ್ವಾಚಾರ್ಯರು ತಿರುಮಲೆಗೆ ಬಂದರೋ ಇಲ್ಲವೋ ತಿಳಿಯುವುದಿಲ್ಲ. ಆದರೆ ದ್ವೈತ ಮತ್ತು ವಿಸ್ತೃತವಾಗಿ ದೇಶಾಟನೆ ಮಾಡಿದರು. ಅವುಗಳಲ್ಲಿ ತಿರುಪತಿ ಒಂದು. ಅವರು ತಿರುಪತಿಗೆ ಬರುವುದಕ್ಕೆ ಒಂದು ಕಾರಣ ಹೇಳುತ್ತಾರೆ.

15 ನೇ ಶತಮಾನದಲ್ಲಿ ಕೆಲವು ಕಾರಣಗಳಿಂದ ಶ್ರೀನಿವಾಸನಿಗೆ ಪೂಜೆ, ಸೇವೆ, ಉತ್ಸವ ಮೊದಲಾದ ಕೈಂಕರ್ಯಗಳಿಗೆ ಅಡ್ಡಿ ಉಂಟಾಯಿತು. ಆವಾಗ್ಗೆ ಸಾಳ್ವ ನರಸಿಂಹರಾಯರು ತಿರುಪತಿ ಶ್ರೀನಿವಾಸನ ಕೈಂಕರ್ಯವನ್ನು ಸುಧಾರಿಸಬೇಕೆಂದು ಮುಳಬಾಗಿಲಿನ ಶ್ರೀಪಾದರಾಯರನ್ನು ಪ್ರಾರ್ಥನೆ ಮಾಡಿದರು. ಆದರೆ ಅವರು ವಯೋಧಿಕರಾದುದರಿಂದ ತಮ್ಮ ಪ್ರಿಯಶಿಷ್ಯ ಮತ್ತೊಂದು ಜನರಲ್ಲಿ ವ್ಯಾಪ್ತಿಯಲ್ಲಿರುವ ಕಥೆಗಳು. ಇವುಗಳಲ್ಲಿ ಜನರಲ್ಲಿ ವ್ಯಾಪ್ತಿಯಲ್ಲಿರುವ ಕಥೆಗಳನ್ನು ನೋಡೋಣ

ವ್ಯಾಸರಾಯರು ತಿರುಪತಿಗೆ ಸೇರಿದರು. ಬೆಟ್ಟ ಹತ್ತಬೇಕಾಯಿತು. ಅವರಿಗೆ ಬೆಟ್ಟ ಆದಿಶೇಷನ ರೂಪವಾಗಿ ಗೋಚರಿಸಿತು. ಮತ್ತು ಕಲ್ಲುಗಳೆಲ್ಲ ಸಾಲಗ್ರಾಮದಂತೆ ಭಾವನೆ ಆಯಿತು. ಪವಿತ್ರ ಬೆಟ್ಟವನ್ನು ಪಾದಗಳಿಂದ ಸೋಕಿಸುವುದು ಪಾಪವೆನಿಸಿ ಅವರು ಮಂಡಿಯೂರಿ ಮೊಣಕಾಲುಗಳಲ್ಲಿ ಬೆಟ್ಟದ ಮೆಟ್ಟಿಲುಗಳನ್ನೇರಿ ತಿರುಮಲೆ ಸೇರಿದರು.

ಪ್ರಥಮದರ್ಶನ ಸಮಯದಲ್ಲಿ ನೂರೆಂಟು

# ತಿರುಪತಿ

ಮ

# ವ್ಯಾಸರಾಯರು

ಮತಕ್ಕೆ ಸೇರಿದ ಹರಿದಾಸರು ತಿರುಪತಿ ತಿಮ್ಮಪ್ಪನನ್ನು ಕೊಂಡಾಡಿದ್ದಾರೆ.

ಹರಿದಾಸರ ಗುಂಪಿನಲ್ಲಿ ವ್ಯಾಸರಾಯರಿಗೆ ಅಗ್ರಸ್ಥಾನ ಉಂಟು. ಅವರು ವ್ಯಾಸಕೂಟವನ್ನು, ದಾಸಕೂಟವನ್ನು ಸ್ಥಾಪಿಸಿ ದ್ವೈತ ಮತವನ್ನು ಬೆಳೆಸಿದರು. ರಾಜಕೀಯವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ಕಾರ್ಯಗಳನ್ನು ಮಾಡಿದರು. ಕೃಷ್ಣರಾಯನಿಗೆ ಕುಹೂಯೋಗ ಬಂದ ಕಾಲದಲ್ಲಿ ಕರ್ನಾಟಕ ಸಿಂಹಾಸನವನ್ನು ಅಲಂಕರಿಸಿ ಆ ಯೋಗದ ದುಷ್ಪರಿಣಾಮಗಳನ್ನು ನಿವಾರಿಸಿದರು, ರಾನ ವ್ಯಾಸರಾಯರನ್ನು ಕಳುಹಿಸುವುದಾಗಿ ಹೇಳಿದರು. ಅವರ ನಿಯಮನ ಪ್ರಕಾರ ವ್ಯಾಸರಾಯರು ತಿರುಪತಿ ಸೇರಿದರು.

ತಿರುಪತಿಗೂ ವ್ಯಾಸರಾಯರಿಗೂ ಇದ್ದ ನಿಕಟ ಸಂಬಂಧವನ್ನು ಮೂರು ಆಧಾರಗಳಿಂದ ನಿರೂಪಿಸಬಹುದು. ಒಂದು ಗ್ರಂಥ ಪ್ರಮಾಣ. ಎರಡು ಶಾಸನ ಪ್ರಮಾಣ.

ಡಾ॥ ಕೆ. ಸರ್ವೋತ್ತಮನ್
ಶ್ರೀ ಸಿ. ಗೋವಿಂದರಾಜು

ಸಾಲಗ್ರಾಮಗಳಿಂದ ಕೂಡಿದ ಒಂದು ಚಿನ್ನದ ಸರವನ್ನು ಅರ್ಪಿಸಿದರು. ಬೇಡಿ ಹನುಮಂತರಾಯನನ್ನು ಪ್ರತಿಷ್ಠಿಸಿದರು. ಗರ್ಭಗುಡಿ ಶಿಖರವನ್ನು ಜೀರ್ಣೋದ್ಧಾರಗೊಳಿಸಿದರು. ಯಾತ್ರಿಕರ ಸಲುವಾಗಿ ಉತ್ತರದಿಕ್ಕಿನಲ್ಲಿ ವಿಮಾನದಲ್ಲಿ ಶ್ರೀನಿವಾಸನ ಮಂಗಳ ಮೂರ್ತಿಯನ್ನು ನಿರ್ಮಿಸಿದರು. ಇದನ್ನೇ ನಾವು ವಿಮಾನ ವೆಂಕಟೇಶ್ವರರೆಂದು ಹೊಗಳುತ್ತೇವೆ.

ವ್ಯಾಸರಾಯರ ಕಾಲದಲ್ಲಿ ಸ್ವಾಮಿ ಉಗ್ರವಾಗಿ ಕಾಣಿಸಿದ್ದನಂತೆ. ಅರ್ಚಕರು ಸಮೀಪಿಸುವುದಕ್ಕೆ ಹೆದರುತ್ತಿದ್ದರು ಆಗ್ಗೆ.

ಪ್ರತಿ ಗುರುವಾರ ಸ್ವಾಮಿ ಪಾದಕ್ಕೆ ಶಂಖೋದಕ ಅಭಿಷೇಕ ವ್ಯವಸ್ಥೆ ಮಾಡಿ ಪೂಲಂಗಿ ಸೇವೆಯನ್ನು ಆರಂಭಿಸಿದರು. ಇದೇ ರೀತಿಯಲ್ಲಿ ಶುಕ್ರವಾರ ಸ್ವಾಮಿಯ ವಿಗ್ರಹಕ್ಕೆ ಪೂರ್ತಿಯಾಗಿ ಪುನುಗಿನ ಅಭಿಷೇಕದ ವ್ಯವಸ್ಥೆಯನ್ನು ಮಾಡಿದರು.

ತಿರುಪತಿ ದೇವಾಲಯದ ಎರಡನೆಯ ಪ್ರಾಕಾರದಲ್ಲಿ ವ್ಯಾಸರಾಯರು ತಮ್ಮ ಶಿಷ್ಯರಿಗೆ ಪಾಠ ಹೇಳುತ್ತಿದ್ದರೆಂದು ಒಂದು ಸ್ಥಳವನ್ನು ತೋರಿಸುತ್ತಾರೆ. ಹನ್ನೆರಡು ವರ್ಷ ಕಾಲ ವೆಂಕಟಪತಿಯ ಪೂಜೆ ಮಾಡಿ ಅವರು ವಿಜಯನಗರ ಸೇರಿದರು.

ತಿರುಪತಿಗೂ ವ್ಯಾಸರಾಯರಿಗೂ ಇದ್ದ ನಿಕಟ ಸಂಬಂಧಕ್ಕೆ ಗ್ರಂಥಗಳೂ ಪ್ರಮಾಣವೇ. ವ್ಯಾಸರಾಯರ ಶಿಷ್ಯರೂ ಸಮಕಾಲೀನರೂ ಮಹಾಪಂಡಿತರೂ ಆಗಿದ್ದ ಸುರೇಂದ್ರತೀರ್ಥರಿಗೆ ಅರ್ಪಿಸಲ್ಪಟ್ಟ ಕುಂಭಕೋಣದ ಜಯೀಂದ್ರ ತೀರ್ಥರು ಬರೆದ 'ಶ್ರೀವ್ಯಾಸರಾಜಾಭ್ಯುದಯ' ಎಂಬ ಸಂಸ್ಕೃತ ಗ್ರಂಥ, ಸೋಮನಾಥ ಕವಿಯಿಂದ ರಚಿತವಾದ 'ಶ್ರೀ ವ್ಯಾಸಯೋಗಿ ಚರಿತೆ'ಯಲ್ಲಿ ವ್ಯಾಸರಾಯರ ತಿರುಪತಿ ಪ್ರಯಾಣದ ಉಲ್ಲೇಖಗಳಿವೆ.

ಮತ್ತೊಂದು – ವ್ಯಾಸರಾಯಕೃತ ಸ್ತೋತ್ರಗಳು. ವ್ಯಾಸರಾಯರು ತಿರುಮಲೆ ಸೇರಿ ಶ್ರೀನಿವಾಸನ ದರ್ಶನಮಾಡಿ ಆನಂದದಿಂದ ಸ್ವಾಮಿ ಆಕಾರವನ್ನು ಸಂಸ್ಕೃತದಲ್ಲಿ ಹೊಗಳಿದ್ದಾರೆ.

ಪ್ರಾತಃ ಸ್ಮರಾಮಿ ರಮಯಾ
ಸಹ ವೇಂಕಟೇಶಂ
ಮಂದಸ್ಮಿತಂ ಮುಖಸರೋರುಹ
ಕಾಂತಿರಮ್ಯಂ
ಮಾಣಿಕ್ಯಕಾಂತಿ ವಿಲಸನ್ಮುಕು
ಟೋರ್ಧ್ವಪುಂಡ್ರಂ
ಪದ್ಮಾಕ್ಷ ಲಕ್ಷ ಮಣಿಕುಂಡಲ
ಮಂಡಿತಾಂಗಂ ||
ಪ್ರಾತರ್ಭಜಾಮಿ ಕರರಮ್ಯ
ಸುಶಂಖಚಕ್ರಂ
ಭಕ್ತಾಭಯಪ್ರದ ಕಟಿಸ್ಥಲ
ದತ್ತಪಾಣಿಂ
ಶ್ರೀವತ್ಸಕೌಸ್ತುಭ ಲಸನ್ಮಣಿ
ಕಾಂಚನಾಢ್ಯಂ
ಪೀತಾಂಬರಂ ಮದನಕೋಟಿ
ಸುಮೋಹನಾಂಗಂ
ಪ್ರಾತರ್ನಮಾಮಿ ಪರಮಾತ್ಮ
ಪದಾರವಿಂದಂ
ಆನಂದಸಾಂದ್ರ ನಿಲಯಂ ಮಣಿ
ನೂಪುರಾಢ್ಯಂ
ಏತತ್ಸಮಸ್ತ ಜಗತಾಮಿತಿ ದರ್ಶಯಂತಂ
ವೈಕುಂಠಮತ್ರ ಭಜತಾಂ ಕರಪಲ್ಲವೇನ||

ತಿರುಪತಿ ತಿರುಮಲೆ ದೇವಸ್ಥಾನದ ಆಧೀನಗಳಲ್ಲಿರುವ ಗುಡಿಗಳ ಮೇಲೆ ಹಲವಾರು ಶಾಸನಗಳು ಕಾಣುತ್ತವೆ. ಅವುಗಳಲ್ಲಿ ವ್ಯಾಸರಾಯರನ್ನು ಕುರಿತು ಹೇಳುವ ಶಾಸನಗಳು ಐದು. ಅವೆಲ್ಲವೂ ತಮಿಳಿನಲ್ಲಿ ಬರೆದ ಶಾಸನಗಳು. ವಿಷಯದೃಷ್ಟಿಯಿಂದ ಅವುಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು.

ಒಂದು ವ್ಯಾಸರಾಯರು ಮಾಡಿದ ಕೈಂಕರ್ಯಗಳನ್ನು ಕುರಿತು ಸ್ಪಷ್ಟಪಡಿಸುವವು. ಈ ವಿಭಾಗದಲ್ಲಿ ಕ್ರಿ.ಶ. 1524 ರ ಶಾಸನವನ್ನು ಉಲ್ಲೇಖಿಸಬಹುದು. ಈ ಶಾಸನದಲ್ಲಿ ವ್ಯಾಸರಾಯರು 14000 ಪಣಗಳನ್ನು ಅನೇಕ ಕೈಂಕರ್ಯಕ್ಕಾಗಿ ಕೊಟ್ಟಿದ್ದಾರೆ. ಅವುಗಳಲ್ಲಿ ಶ್ರೀನಿವಾಸನಿಗೆ ಎಂಟು ಬ್ರಹ್ಮೋತ್ಸವಕ್ಕೆ 96 ಅಪ್ಪಪ್ಪಡಿ ನಿರ್ದೇಶ ಮಾಡಿದ್ದಾರೆ ಮತ್ತು ಕೋಡೈತ್ತಿರುನಾಳಿಗೆ, ಅಧ್ಯಯನೋತ್ಸವಕ್ಕೆ, ಡೋಲೋತ್ಸವಕ್ಕೆ ಸಹಸ್ರಕಳಸ ಅಭಿಷೇಕಕ್ಕೆ, ಏಕಾದಶಿ, ಪೌರ್ಣಮಿ ಪರ್ವದಿನಗಳಲ್ಲಿ ನಡೆಯುವ ವಿಶೇಷ ಆರಾಧನೆಗಳಿಗೆ, ಉಗಾದಿ, ದೀಪಾವಳಿಗಳಲ್ಲಿ ನಡೆಯುವ ಪೂಜೆಗಳಿಗೆ ನಿವೇದನೆಯನ್ನು ಕುರಿತು ನಿರ್ದೇಶಮಾಡಿದ್ದಾರೆ. ಇದರಲ್ಲಿ ಗೋವಿಂದರಾಜನಿಗೆ ಮಾಡಬೇಕಾದ ಕೈಂಕರ್ಯಗಳನ್ನು ಹೇಳಿದ್ದಾರೆ

ಮತ್ತೊಂದು ವ್ಯಾಸರಾಯ ಮಠಕ್ಕೆ ಸಂಬಂಧಿಸಿದ ಶಾಸನಗಳು. ಶ್ರೀಕೃಷ್ಣದೇವರಾಯರು ವ್ಯಾಸರಾಯರಿಗೆ ತಿರುಪತಿಯಲ್ಲಿ ಮಠಕ್ಕಾಗಿ ಕೊಟ್ಟ ಸ್ಥಳಗಳನ್ನು ಕುರಿತು ನಾಲ್ಕು ಶಾಸನಗಳು ಕಾಣುತ್ತವೆ. ವ್ಯಾಸರಾಯರ ಕಾಲದಲ್ಲಿ ಸಿರೈಪ್ಪಯ್ಯನ್ ಶ್ರೀನಿವಾಸನ ಭೂಷಣಗಳನ್ನು ಅಪಹರಿಸಿದ. ಆಗ್ಗೆ ರಾಜರು ಅವರ ಸ್ಥಳವನ್ನು ಮಠಕ್ಕಾಗಿ ಕೊಟ್ಟರು. ಅದು ತಿರುಪತಿ ಗೋವಿಂದರಾಜಸ್ವಾಮಿ ಉತ್ತರಮಾಡ ಬೀದಿಯಲ್ಲಿದೆ. ಮತ್ತೊಂದು ಶಾಸನದಲ್ಲಿ ತಿರುಮಲೆಯಲ್ಲಿ ಸ್ವಾಮಿಪುಷ್ಕರಿಣಿಗೆ ಉತ್ತರವಾಗಿರುವ ಸ್ಥಳದಲ್ಲಿ ಮಠನಿರ್ಮಾಣಕ್ಕೆ ರಾಯರು ಅನುಮತಿ ನೀಡಿದರು. ಮತ್ತೊಂದು ಶಾಸನದಲ್ಲಿ ಭಾದ್ರಪದ ಮಾಸದಲ್ಲಿ ನಡೆಸಬೇಕಾದ ಬ್ರಹ್ಮೋತ್ಸವಕ್ಕಾಗಿ ಕೊಟ್ಟ ಗ್ರಾಮಗಳ ಆದಾಯದಲ್ಲಿ ಸ್ವಲ್ಪ ಭಾಗವನ್ನು ಪ್ರಸಾದರೂಪವಾಗಿ ಮಠಕ್ಕೆ ಸೇರಬೇಕೆಂದು ರಾಯರು ನಿರ್ಣಯ ಮಾಡಿದ್ದಾರೆ. ಮತ್ತೊಂದು ಶಾಸನದಲ್ಲಿ ಪಾಪವಿನಾಶಕ್ಕೆ ಹೋಗುವ ಹಾದಿಯಲ್ಲಿ ನಿವೇಶನ ಸ್ಥಳವನ್ನು ಕೊಟ್ಟಿದ್ದರೆಂದು ಉಲ್ಲೇಖವಿದೆ.

ಇವಲ್ಲದೆ ದಿನ ನಿತ್ಯದ ಪೂಜೆಯ ವಜ್ಜಕ್ಕೆಂದು ಅನೇಕ ಬೆಲೆ ಬಾಳುವ ಭೂಮಿಯನ್ನು ವ್ಯಾಸರಾಯರು ದತ್ತಿ ಹಾಕಿ ಕೊಟ್ಟರು. ಅವುಗಳಲ್ಲಿ "ಒಡ್ಡಂಪಟ್ಟು", ಗ್ರಾಮ ಮುಖ್ಯವಾದದ್ದು. ಆ ಗ್ರಾಮದ ವಸೂಲಿಂದ ಗೋವಿಂದರಾಜಸ್ವಾಮಿಗೆ ಪೌರ್ಣಮಿದಿನದಲ್ಲಿ 'ತಿರುಮಂಜನಮ್' ಮಾಡಬೇಕೆಂದು ನಿರ್ದೇಶಿದ್ದಾರೆ.

ವ್ಯಾಸರಾಯರು ಸಿರಿಕೃಷ್ಣನ ಅಂಕಿತದಲ್ಲಿ ಮಾಡಿರುವ ಕೀರ್ತನೆಗಳು ದೊರಕುತ್ತವೆ. ಆದರೆ ಶ್ರೀನಿವಾಸನ ಮೇಲೆ ಮಾಡಿರುವ ಕನ್ನಡ ಕೀರ್ತನೆಗಳು ಸಿಕ್ಕುವುದಿಲ್ಲ. ಇದಕ್ಕೆ ಎರಡು ಕಾರಣಗಳನ್ನು ಊಹಿಸಲಾಗಿದೆ ಒಂದು ಪುರಂದರದಾಸರು, ಕನಕದಾಸರು ಮೊದಲಾದ ಹರಿದಾಸರ ರಚನೆಗಳ ಪ್ರಭಾವದಲ್ಲಿ ವ್ಯಾಸರಾಯರ ಕೀರ್ತನೆಗಳು ಅಡಗಿರಬಹುದು. ಮತ್ತೊಂದು ರಕ್ಕಸ ತಂಗಡಿ ಯುದ್ಧನಂತರ ನಷ್ಟವಾಗಿರಬಹುದು. ಮಹಾತ್ಮರ ಪುಣ್ಯಕಾರ್ಯಗಳಿಗೆ ಮರಣವಿಲ್ಲ.

———

(12ನೇ ಪುಟದಿಂದ)

ಅಥವಾ ಚೇತನಾಚೇತನಗಳಿಗಷ್ಟೇ ವೈದಿಕನು ತನ್ನ ಜ್ಞಾನವನ್ನು ಸೀಮಿತಗೊಳಿಸಿದರೆ ಗಾಳಿಯಲ್ಲಿ ತೇಲಾಡುವಂತಾಗಿ, ನಿರಾಧಾರನಾಗುವನು. ಇದೇ 'ಅಪರ್ಯವಸಾನವೃತ್ತಿ' ಆ ಪರಬ್ರಹ್ಮವನ್ನು ಸೇರಿಸಿದರೆ ಮಾತ್ರ 'ಪರ್ಯವಸಾನ' ಸಾಧ್ಯ. ಆದುದರಿಂದ ಈಶ್ವರತತ್ತ್ವ ಚಿತ್ತು ಮತ್ತು ಅಚಿತ್ತು ಮೂರು ಕೂಡಿ ವಿಶಿಷ್ಟವಾದ ತತ್ತ್ವವಾಗಿದೆ.

ಮಂತ್ರ ಬ್ರಹ್ಮಣಿ ಮಧ್ಯಮೇನ
ನಮಸಾ ಪುಂಸಃ ಸ್ವರೂಪಂ ಗತಿಃ
ಗಮ್ಯಂ ಶಿಕ್ಷಿತಂ ಈಕ್ಷಿತೇನ
ಪುರತಃ ಪಶ್ಚಾತ್ ಅಪಿ ಸ್ಥಾನತಃ ।
ಸ್ವಾತಂತ್ರ್ಯಂ ನಿಜರಕ್ಷಣಂ ಸಮುಚಿತಾ
ವೃತ್ತಿಶ್ಚ ನಾನ್ಯೋಚಿತಾ
ತಸ್ಯೈವೇತಿ ಹರೇಃ ವಿವಿಚ್ಯ ಕಥಿತಂ
ಸ್ವಸ್ಯಾಪಿ ನಾರ್ಹಂ ತತಃ ॥

ದ್ವಿತೀಯ ಶ್ಲೋಕವು ಮುಖ್ಯವಾಗಿ ನಮಃ ಎಂಬ ಪದದ ಮಹತ್ವವನ್ನು ಮತ್ತು ಚೇತನನ ನಡವಳಿಕೆಯನ್ನು ತಿಳಿಸುತ್ತದೆ ಮೂರು ಪದಗಳಿಂದುಂಟಾಗಿ 'ಮಂತ್ರ ಬ್ರಹ್ಮ' ಎಂದು ಹೇಳಲ್ಪಟ್ಟಿರುವ ಅಷ್ಟಾಕ್ಷರಿಯೇ ಶಬ್ದರೂಪವ ಪರಬ್ರಹ್ಮ, ಅಷ್ಟಾಕ್ಷರಿಯು ವಾಚಕ ಮತ್ತು ಚಿದಚಿತ್ತುಗಳು ಈಶ್ವರ ವಿಶಿಷ್ಟವಾದ ವಾಚ್ಯಗಳಾಗಿವೆ. ಚಿತ್, ಅಚಿತ್ ಮತ್ತು ಈಶ್ವರ ಇವುಗಳಲ್ಲಿ ಈಶ್ವರನೇ ದ್ರವ್ಯವೆಂಬುದು ಶ್ರುತಿ ಪ್ರತ್ಯಕ್ಷ ಮತ್ತು ಅನುಭವಸಾಕ್ಷಿಕವಾಗಿದೆ. ಚಿತ್ ಮತ್ತು ಅಚಿತ್‌ಗಳು ಈಶ್ವರನಿಗೆ ವಿಶೇಷಣಗಳಾಗಿ, ಈಶ್ವರನೊಂದಿಗೆ ದ್ರವ್ಯವಾಗಿರುವ ಹಕ್ಕನ್ನು ನಿರಾಕರಿಸುತ್ತವೆ. ಪ್ರತ್ಯೇಕವಾಗಿ ದ್ರವ್ಯವಾಗಿದ್ದರೂ ಈಶ್ವರನೊಂದಿಗೆ ಒಂದುಗೂಡಿದಾಗ ದ್ರವ್ಯತ್ವವಾಗಿದ್ದರೂ ಪ್ರಕಾರವಾಗಿವೆ. ಈ ಅಭಿಪ್ರಾಯವು ಶೋಧಕ ವಾಕ್ಯದ ಫಲ. ನ ಮತ್ತು ಮಃ ಎಂದು ವಿಂಗಡಿಸಿ ವಾಕ್ಯವಾದರೆ 'ನಮಃ' ಪದ ಸಾರ್ಥಕವಾಗುತ್ತದೆ.

'ನಮಃ' ಪದವು ಮೂರು ಪದಗಳುಳ್ಳ ಅಷ್ಟಾಕ್ಷರೀ ಮಂತ್ರದ ಮಧ್ಯದಪದವಾಗಿ (ಮಧ್ಯಮೇನ ನಮಸಾ) ಈಶ್ವರನ ಸಂಬಂಧ ಹೊಂದಿರುವುದರಿಂದ ಚೇತನನನ್ನು ಆಕ್ರೋಶ್ನತಿಯ ಕಡೆಗೆ ಸೆಳೆಯುತ್ತದೆ. ಪ್ರಣವವನ್ನು ಮೊದಲ ಪದವಾಗಿ (ಪುರತಃ) ಮತ್ತು 'ನಾರಾಯಣ' ಪದವನ್ನು ಕೊನೆಯ ಪದವಾಗಿ (ಪಶ್ಚಾತ್) ಹೊಂದಿರುವುದರಿಂದ 'ನಮಃ' ಶಬ್ದವು ಅತ್ಯಂತ ಸುಸಂಸ್ಕೃತ (ಶಿಕ್ಷಿತಂ) ರೀತಿಯಲ್ಲಿ ತಿರುಮಂತ್ರದಲ್ಲಿ ಸೇರಿ (ಸ್ಥಾನತಃ ಅಪಿ) ಜೀವನಿಗೆ ಮಾರ್ಗದರ್ಶಿಯಾಗಿದೆ· ಜೀವಾತ್ಮನು ಸ್ವಂತ (ಸ್ವಾತಂತ್ರ್ಯ) ಅಸ್ತಿತ್ವಕ್ಕೆ ಅಥವಾ ನಿಜ ರಕ್ಷಣೆಗೆ ಅಸಮರ್ಥ ಎಂಬುದು ಸ್ಥಿರಪಟ್ಟಿದೆ. ಸಮುಚಿತವಾದ ಕೈಂಕರ್ಯ (ಸಮುಚಿತಾ) ಮತ್ತು ನಡವಳಿಕೆ ಆ ಭಗವಂತನಿಗೆ (ತಸ್ಯೈವೇತಿ ಹರೇಃ) ಅಲ್ಲದೆ ಅನ್ಯರಿಗೆ ಸಲ್ಲದು (ನಾನ್ಯೋಚಿತಾ) ಎಂಬುದು ಸ್ಪಷ್ಟವಾಗಿದೆ (ವಿವಿಚ್ಯ ಕಥಿತಂ). ಆದ್ದರಿಂದ ಅಚೇತನದಿಂದ ಬಿಡುಗಡೆಗೆ ಆರಸುತ್ತಿರುವ ಆತ್ಮನಿಗೆ ಅಧಿಕಾರ ಸೇರಲಾರದು. (ಸ್ವಸ್ಯಾಪಿ ನಾರ್ಹಂ)

ಆ ಪರಮಾತ್ಮನಲ್ಲದೆ ಇತರ ಎಲ್ಲಾ ಚೇತನಾಚೇತನಗಳು ತಮ್ಮ ಸಹಜ ಸ್ವಭಾವದಿಂದ ವಿಶೇಷಣಗಳೇ ಆಗಿವೆಯಲ್ಲದೆ, ಅವುಗಳ ಪರತಂತ್ರ ಸ್ಥಿತಿಯಿಂದ ಅಧಿಕಸ್ಥಾನ ಉಪಯೋಗದ ಹಕ್ಕು ಅಸಾಧ್ಯ. ಚೇತನನು ತನಗೆ ಸಹಜವಾಗಿ ಹಕ್ಕಿಲ್ಲದ ದ್ರವ್ಯಸ್ಥಾನವನ್ನು ಬಯಸಿ ಭೋಗಿಸುವ ಅನುಭವದಲ್ಲಿ ತೊಡಗದೆ ಅದಕ್ಕೆ ವಿರುದ್ಧವಾಗಿ ಹೋರಾಡಬೇಕಾದುದೇ ಮುಖ್ಯ ಹೊರೆ.

'ಮಃ'– ನನಗೆ, 'ನ'– ಸ್ವಾತಂತ್ರ್ಯವಿಲ್ಲ ಎಂಬ ಅರ್ಥದಿಂದ ಕೂಡಿ 'ನಮಃ' ಶಬ್ದವು ಶರಣಾಗತಿಯನ್ನು ತಿಳಿಸುತ್ತದೆ.

ಅಕಾರಾರ್ಥಾಯೈವ ಸ್ವ ಮಹಂ
ಅಥ ಮಹ್ಯಂ ನ ನಿವಹಾ
ನರಾಣಾಂ ನಿತ್ಯಾನಾಂ ಅಯನಂ ಇತಿ
ನಾರಾಯಣಪದಂ ಯಂ ಆಹ
ಅಸ್ಮೈ ಕಾಲಂ ಸಕಲ ಮಪಿ
ಸರ್ವತ್ರ ಸಕಲಾಸು ಅವಸ್ಥಾಸು
ಆವಿಸ್ಸ್ಯುಃ ಮಮ ಸಹಜ
ಕೈಂಕರ್ಯ ವಿಧಯಃ

ಮೂರನೆಯ ಶ್ಲೋಕವು ಚೇತನನ ಅಸ್ತಿತ್ವದ ಮುಖ್ಯ ಉದ್ದೇಶವನ್ನು ತಿಳಿಸುತ್ತದೆ. ಜೀವಾತ್ಮನ ಇರುವಿಕೆಯೇ ಆ ಪರಬ್ರಹ್ಮನ ಕೈಂಕರ್ಯಕ್ಕಾಗಿ– ಈಶ್ವರಾರ್ಥಂ–ತನಗಾಗಿ ಅಲ್ಲ (ಅಥ ಮಹ್ಯಂ ನ) ಏಕೆಂದರೆ ಜೀವನು ಈಶ್ವರನ ಪ್ರಕಾರನಾಗಿರುವನು (ಸ್ವ ಅಹಂ) ಚೇತನನಿಗೆ ಸೇರದ ಪ್ರವೃತ್ತಿ ಶಕ್ತಿ ಮತ್ತು ಉದ್ದೇಶವು ಈಶ್ವರನಿಂದಲೇ ಪಡೆದುದಾಗಿವೆ ಆದುದರಿಂದ ಜೀವನು ತನ್ನ ಎಲ್ಲಾ ಕೆಲಸಗಳಿಂದ ಸ್ವಾಮಿಯಾದ ಈಶ್ವರನನ್ನು ಸಂತೋಷಪಡಿಸಲು ಯತ್ನಿಸುತ್ತಾನೆ. ಈಶ್ವರನ ಸಂಕಲ್ಪವನ್ನೇ ತನ್ನ ಸಂಕಲ್ಪವನ್ನಾಗಿ ಎಣಿಸುತ್ತಾನೆ.

ಈಶ್ವರನ ಪ್ರಕಾರವಾಗಿರುವುದೇ ಜೀವನನ ಮಹಿಮೆ. ಪರಮಾತ್ಮನ ಸಹಜವಾದ ಸ್ವತ್ತು ಆಗಿರುವುದರಿಂದ ಸ್ವಂತ ಉದ್ದೇಶಕ್ಕಲ್ಲದೆ, ಆ ಪರಬ್ರಹ್ಮನ ಉದ್ದೇಶಕ್ಕಾಗಿಯೇ ಇರುವುದು (ಸ್ವ ಅಹಂ, ಅಥ ಮಹ್ಯಂ ನ)

'ನಾರಾಯಣ' ಎಂಬ ಪದದ ಅರ್ಥವ್ಯುತ್ಪತ್ತಿ ಮಾಡಿದರೆ, 'ನಾರಣಾಂ ಅಯನಂ ಯಃ ಸಃ ನಾರಾಯಣಃ ಎಂದೂ, 'ನಾರಾಃ ಅಯನಂ ಯಸ್ಯ ಸಃ ನಾರಾಯಣಃ ಎಂದೂ, ಎರಡು ರೀತಿಯಲ್ಲಿ ತಿಳಿಸಿದೆ. ನಾರಾಣಾಂ ಎಂದರೆ ನಿತ್ಯವಸ್ತುಗಳ ಸಮೂಹ. ಅವಕ್ಕೆಲ್ಲಾ ಆಧಾರಭೂತನಾದವನು ನಾರಾಯಣನೆಂದೂ, ನಿತ್ಯ ವಸ್ತುಗಳಲ್ಲಿ ಸದಾ ವಾಸಿಸುವವನೂ ನಾರಾಯಣನೆಂದೂ, ಅಂತರ್ವ್ಯಾಪ್ತಿ ಮತ್ತು ಬಹಿರ್ವ್ಯಾಪ್ತಿಗಳಿಂದ 'ನಾರಾಯಣ' ಎಂಬ ಸರ್ವೋತ್ಕೃಷ್ಟ ಹೆಸರಿನವನೇ ಭಗವಂತನೆಂದೂ ಆಗುತ್ತದೆ. (ನಿವಹಾ ನರಾಣಾಂ ನಿತ್ಯಾನಾಂ ಅಯನಂ ಇತಿ ನಾರಾಯಣ ಪದಂ) ಆದುದರಿಂದ ಆ ಪರಮಾತ್ಮನು ಚೇತನಾ ಚೇತನ ವಸ್ತುಗಳ ಅಂತರಾತ್ಮನಾಗಿಯೂ ಮತ್ತು ಪ್ರಕೃತಿಯನ್ನು ಆವರಿಸಿಯೂ ಇರುತ್ತಾನೆ. ಬ್ರಹ್ಮನು ಜಗತ್ತಿಗೆ ಆಧಾರ, ಚಿತ್ ಮತ್ತು ಅಚಿತ್‌ಗಳು ತಮ್ಮ ಅಸ್ತಿತ್ವಕ್ಕೆ ಬ್ರಹ್ಮವನ್ನು ಆಶ್ರಯಿಸಿವೆ

ಈಶ್ವರನು ಸರ್ವವ್ಯಾಪಿ ಮತ್ತು ಸರ್ವಾಂತರ್ಯಾಮಿ ಆಗಿರುವುದರಿಂದ (ಅಸ್ಮೈ) ಪ್ರತಿಯೊಬ್ಬ ಚೇತನನಿಂದಲೂ ಸೇವೆಗೆ ಅರ್ಹನಾಗಿದ್ದಾನೆ. ಇದರಿಂದ "ಸರ್ವದೇಶ, ಸರ್ವಕಾಲ, ಸರ್ವಾವಸ್ಥೋಚಿತ ಕೈಂಕರ್ಯಾಯ ಅಹಂ ಸ್ಯಾಂ" ಎಂಬುದಾಗಿ ಪ್ರಾರ್ಥಿಸುವುದೇ ಪುರುಷಾರ್ಥ. (ಕಾಲಂ ಸಕಲಮಪಿ ಸರ್ವತ್ರ ಸಕಲಾಸು ಅವಸ್ಥಾಸು) ಕೈಂಕರ್ಯವು ಚೇತನನಿಂದ ಯಾವ ಬಲಾತ್ಕಾರಕ್ಕೂ ಒಳಪಡದೆ (ಸಹಜ ವಿಧಯಃ ಕೈಂಕರ್ಯ) ಸಹಜವಾಗಿ ಸಾಂಗವಾಗಿ ನಡೆಯಬೇಕು (ಆವಿಸ್ಸ್ಯುಃ)

ಚೇತನನು ಎಂದಿಗೂ ಸ್ವಾಮಿತ್ವವನ್ನು ತನಗೆ ತಾನೆ ಆದರಿಸಲಾರ. ಉದ್ದೇಶಸಾಧನೆಗಾಗಿ, ಅ – ಕಾರ ಪ್ರತೀಕವಾದ, ಪರಿಪೂರ್ಣವಾದ ಸ್ವಾಮಿಯ ಸಂಬಂಧವನ್ನು ನೆನೆದು 'ಸ್ವಂ' ಪಾತ್ರಕ್ಕೆ ಬದ್ಧನಾಗಿ ಶ್ರದ್ಧೆಯಿಂದ ನಿರ್ವಹಿಸಬೇಕು. ಇದೇ ಪ್ರಪತ್ತಿಯ ಸಿದ್ಧಾಂತದ ಅರ್ಥ ಸೂಚಕ. ಇದರಲ್ಲಿ ಅಂಗೀಕರಿಸುವದೇನೆಂದರೆ "ತಾನು ಭಗವಂತನಿಗೆ ಸೇರಿದವನು" ಎಂದು ಸಾಧಕನು ಮನಗಾಣಬೇಕು.

ದೇಹಾಸಕ್ತಾತ್ಮಬುದ್ಧಿಃ ಯದಿ ಭವತಿ,
ಪದಂ ಸಾಧು ವಿದ್ಯಾತ್ ತೃತೀಯಂ,
ಸ್ವಾತಂತ್ರ್ಯಾಂಧೋ ಯದಿ ಸ್ಯಾತ್ ಪ್ರಥಮಂ,
ಇತರ ಶೇಷತ್ವ ಧೀಶ್ಚೇತ್ ದ್ವಿತೀಯಂ
ಆತ್ಮತ್ರಾಣೋನ್ಮುಖಶ್ಚೇತ್ ನಮ
ಇತಿ ಚ ಪದಂ, ಬಾಂಧವಾಭಾಸಲೋಲಃ
ಶಬ್ದಂ ನಾರಾಯಣಾಖ್ಯಂ, ವಿಷಯ
ಚಪಲ ಧೀಶ್ಚೇತ್ ಚತುರ್ಥೀಂ ಪ್ರಪನ್ನಃ

ಈ ನಾಲ್ಕನೇ ಶ್ಲೋಕದಲ್ಲಿ ಚೇತನನು ಮನೋವಾಕ್ಕಾಯಗಳಿಂದ ತನಗೆ ಅನುಗುಣವಾದ ಸಹಜ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್ ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಸ್ಥಿತಿಯನ್ನು ಮರೆಯದೆ ಭಗವಂತನಿಗೆ ಅಭಿಮುಖವಾಗಿರಲು ಆರು ಸೂಕ್ತವಾದ ಸಲಹೆಗಳನ್ನು ತಿಳಿಸಿದೆ ಪ್ರಪನ್ನನು ಈ ಎಚ್ಚರಿಕಾರೂಪದ ಸಲಹೆಗಳನ್ನು ಗಮನಿಸಲು ನಿರಾಕರಿಸಲಾರ: ( ಪ್ರಪನ್ನಃ ಸಾಧು ವಿದ್ಯಾತ್ )

1 ಪ್ರಾಕೃತವಾದ ಈ ಶರೀರದಲ್ಲಿ ಆತ್ಮನು ನೆಲೆಸಿರುತ್ತಾನೆ ಆತ್ಮನು ದೇಹೇಂದ್ರಿಯ ವಿಲಕ್ಷಣನು, ಅಜಡನೂ, ಆನಂದಸ್ವರೂಪನು, ನಿತ್ಯನು, ಅಣುಸ್ವರೂಪನು, ಅವ್ಯಕ್ತನು, ಅಚಿಂತ್ಯನು ನಿರವಯವನು, ಜ್ಞಾನ ಸ್ವರೂಪನು, ನಿರ್ವಿಕಾರನು, ಹಾಗೂ ಆತ್ಮನು ಜ್ಞಾತಾ, ಕರ್ತಾ ಮತ್ತು ಭೋಕ್ತಾ ಎನ್ನಿಸಿಕೊಳ್ಳುತ್ತಾನೆ. ಈಶ್ವರ ನಿಯಾಮ್ಯನು ಮತ್ತು ಈಶ್ವರಭೂತನು ಆಗಿರುತ್ತಾನೆ ಈ ಗುಣಗಳಿಂದ ಕೂಡಿ ಜಡದೇಹದಲ್ಲಿ ಸೇರಿದ್ದಾನೆ ಆತ್ಮನನ್ನು ಆದರಿಸುವ ಛಾರಜೀವನದು. ರಕ್ಷಣೆ ಮತ್ತು ಮರ್ಯಾದೆಗೆ ಅವಕಾಶವಿರಬೇಕಲ್ಲದೇ ಅಮೂಲ್ಯವಸ್ತುವೆಂದು ಅದನ್ನು ಪೂಜಿಸಬೇಕು. ಇಂಥಹ ಪವಿತ್ರ ಆತ್ಮನನ್ನು ಪ್ರಾಕೃತ ಶರೀರ ಮಟ್ಟದಲ್ಲೇ ಭಾವಿಸಿದ್ದೆ ಆದರೆ, ಪ್ರಣವದಲ್ಲಿರುವ ಮೂರನೇ ಅಕ್ಷರ ಮ–ಕಾರ ( ಸಾಧು ವಿದ್ಯಾತ್ ತೃತೀಯಂ ) ಜ್ಞಾನವಾಚಿಯು ಎಚ್ಚರಿಸುತ್ತದೆ. ಸಹಜವಾಗಿ ಮ–ಕಾರವು ದೇಹದ ವಸ್ತುವಿಗಿಂತ ಬೇರೆಯಾಗಿದ್ದು ಅಪ್ರಾಕೃತವಾಗಿದೆ. ಮ–ಕಾರದ ವಿಷಯದಲ್ಲಿ ಅಜ್ಞಾನದಿಂದ ಕೂಡಿದ್ದೇ ಆದರೆ ನಿರಾಶೆಗೆ ಕಾರಣವಾಗಿ ಕಂಗೆಡುವಂತಾಗುತ್ತದೆ.

2. ಚೇತನನು ತನಗೆ ಸ್ವಾಮಿತ್ವವನ್ನೂ ಮತ್ತು ಸ್ವಾತಂತ್ರ್ಯವನ್ನು ಕಲ್ಪಿಸಿಕೊಂಡು, ಆ ಚೇತನದ ಕಡೆಗೆ ಅಧಿಕಾರಯುಕ್ತ ಜ್ಞಾನವನ್ನು ಬಳಸಿ, ಸತ್ಯದಕಡೆ ವಿವೇಕಶೂನ್ಯನಾದರೆ, ಪ್ರಣವದ ಮೊದಲನೇ ಅಕ್ಷರವಾದ ಅ– ಕಾರ ( ವಿಷ್ಣು) ವನ್ನು ನೆನಪಿನಲ್ಲಿಡಬೇಕೆಂದು ಸೂಚಿಸಿದೆ. (ಸ್ವಾತಂತ್ರ್ಯಂಧೋಯದಿ ಸ್ಯಾತ್ ಪ್ರಥಮಂ) ಚೇತನನು 'ಸ್ವಂ' ಆಗಬಲ್ಲನೇ ಹೊರತು 'ಸ್ವಾಮಿ' ಆಗಲಾರನು

3. ಜೀವನು ಆ ಪರಮಾತ್ಮನನ್ನಲ್ಲದೆ ಇತರ ಚೇತನರುಗಳ ಕಡೆ ಗಮನಿಸಿದ್ದೇ ಆದರೆ ಆಗ (ಇತರ ಶೇಷತ್ವ ಧೀಶ್ಚೇತ್ ದ್ವಿತೀಯಂ) ಪ್ರಣವದ ಎರಡನೆ ಅಕ್ಷರ ಉ–ಕಾರವನ್ನು ಗಮನದಲ್ಲಿಡಬೇಕು. ಉ–ಕಾರವು ಸ್ವಾಮಿತ್ವವನ್ನು ನಿರ್ಧರಿಸುತ್ತದೆ. ಇತರ ಆ ಪರಬ್ರಹ್ಮನಲ್ಲದಿರುವ ಎಲ್ಲಾ ಚೇತನರೂ 'ಸ್ವಂ' ಆಗಿ ಎಲ್ಲಾ ಹಂತಗಳಲೂ ಸ್ವಾಮಿತ್ವಕ್ಕೆ ಅನರ್ಹತೆ ಹೊಂದಿದ್ದಾರೆ. ಈ ತಿಳಿವಳಿಕೆಯುಳ್ಳ ಚೇತನನು ಮ–ಕಾರದವರ್ಗ ದೊಂದಿಗೇ ಸೇರಿ ಆ ಭಗವಂತನ ಸ್ವತ್ತು ಆಗುವ ಬಾಂಧವ್ಯ ಹೊಂದಿರುವನು ಆದುದರಿಂದ ಉ–ಕಾರವು ಅನನ್ಯ ಶೇಷತ್ವವನ್ನು ತಿಳಿಸುವುದು. ಈಶ್ವರನಿಗೊಬ್ಬನಿಗಲ್ಲದೆ ಬೇರೆಯಾರಿಗೂ ಜೀವನು ಶೇಷನಲ್ಲ.

4. ಜೀವನು ತನ್ನ 'ದೇಹ' ರಕ್ಷಣೆಯಲ್ಲೇ ಆಸಕ್ತನಾದರೆ (ಆತ್ಮತ್ರಾಣೋನ್ಮುಖ ಶ್ಚೇತ್ ನಮ ಇತಿ ಚ ಪದಂ) 'ನಮಃ' ಎಂಬ ಪದವನ್ನು ನೆನಪಿನಲ್ಲಿಡ ಬೇಕು. ಸ್ವಾತಂತ್ರ್ಯವನ್ನು ಬಿಟ್ಟು, ಇತರರನ್ನು ಹತೋಟಿಯಲ್ಲಿಡಲು ಅಸಾಧ್ಯವೆಂದು ತಿಳಿದು ಬಗ್ಗಿ ನಮಸ್ಕರಿಸುವುದೊಂದೇ ಮಾರ್ಗ.

5. ಅವಶ್ಯಕವಿರುವಾಗ ಅನ್ಯರ ಅಂದರೆ ಬಂಧುಬಳಗದವರ ಸಹಾಯಹೊಂದಲು ಪ್ರಯತ್ನಿಸಿದ್ದೇ ಆದರೆ, ಚೇತನನಿಗೆ ಶ್ರೀಮನ್ನಾರಾಯಣನಲ್ಲದೆ ಮತ್ಯಾರೂ ಕಷ್ಟದಲ್ಲಿ ಭಾಗಿಯಾಗಿ ತೊಂದರೆಯಿಂದ ಪಾರು ಮಾಡಲಾರರು. (ಬಾಂಧವಾ ಭಾಸ ಲೋಲಃ ಶಬ್ದಂ ನಾರಾಯಣಾಖ್ಯಂ) ಏಕೆಂದರೆ 'ನಾರಾಯಣ' ಎಂಬ ಪದದ 'ನಾರ' ಶಬ್ದವು ಪ್ರಾಪಂಚಿಕ ವಸ್ತುಗಳಿಗೆ ಅನ್ವಯಿಸಿ, ಅವುಗಳು ನಮ್ಮ ಸಹಾಯಕ್ಕೆ ಆಗಲಾರವು ಎಂಬುದು ಸ್ಪಷ್ಟವಾಗಿದೆ ಆದ್ದರಿಂದ ನಮ್ಮ ಕಷ್ಟಗಳ ನಿವಾರಣೆಗೆ ನಾರಾಯಣನೊಬ್ಬನನ್ನೇ ನಂಬಬೇಕು

6 ಪರಿಸರದ ಪ್ರಭಾವದಿಂದ ಪ್ರಾಪಂಚಿಕ ಸುಖ ಸಂತೋಷಗಳಲ್ಲೇ ಜೀವನು ಆಸಕ್ತನಾಗಿದ್ದರೆ, ತನ್ನ ನಡವಳಿಕೆಯನ್ನು ಕೈಂಕರ್ಯ ಸ್ವಭಾವಕ್ಕೆ ಮಾರ್ಪಡಿಸಿಕೊಳ್ಳಬೇಕು. ಸ್ವಾಮಿ ಕೈಂಕರ್ಯವೇ ಕೈಂಕರ್ಯವೆನಿಸಿಕೊಳ್ಳುವುದು. ನಾರಾಯಣ ಪದದಲ್ಲಿ 'ಆಯ' ಎಂಬ ಚತುರ್ಥಿಯು ಭಗವದ್ದಾಸ್ಯವನ್ನು ಪ್ರಾರ್ಥಿಸುವುದು (ವಿಷಯ ಚಪಲ ಧೀಶ್ಚೇತ್ ಚತುರ್ಥೀಂ ಪ್ರಪನ್ನಃ)

ಸರ್ವರಕ್ಷಕನಾದ ಪರಮಾತ್ಮನನ್ನು ಮರೆಯಲು ಅವಕಾಶವಿಲ್ಲದಂತೆ ಶ್ರೀ ಪರಾಶರಭಟ್ಟರು ಮೇಲೆ ತಿಳಿಸಿರುವ ಆರು ರಕ್ಷಣಾಕವಚಗಳನ್ನು ನಾಲ್ಕನೇ ಶ್ಲೋಕದಲ್ಲಿ ತಿಳಿಸಿ, ಜೀವಾತ್ಮನು ಪ್ರಕೃತಿಯಲ್ಲೇ ತನ್ಮಯನಾಗದೆ ಭಗವಂತನಿಗೆ ಸೇರಿದವನೆಂಬ ಭಾವನೆಯಿಂದ ಸದಾ ಭಗವತ್ಸಂಬಂಧವನ್ನು ಹೊಂದಿರುವುದೇ ಮುಖ್ಯಗುರಿ ಎಂಬುದನ್ನು ಸೂಚಿಸಿರುತ್ತಾರೆ

ಮೇಲಿನ ನಾಲ್ಕು ಶ್ಲೋಕಗಳು ಪರಮಾತ್ಮನು ಬದರೀಪುಣ್ಯಕ್ಷೇತ್ರದಲ್ಲಿ ನರನಿಗೆ ತಿಳಿಸಿದ "ಅಷ್ಟಾಕ್ಷರಿ" ಮಂತ್ರದ ಸಾರಾಂಶವಾಗಿದೆ.

( ಮುಂದುವರೆಯುವುದು.)

ಈ

## ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ

ಜನ್ಮ ಜನ್ಮಾಂತರೇಪಿ ತ್ವತ್ ಪಾದಾಂ ।
ಭೋರುಹಯುಗಗತಾ ನಿಶ್ಚಲಾಭಕ್ತಿರಸ್ತು ॥

ಅಜ್ಞಾನಿನಾ ಮಯಾದೋಷಾನ್
ಅಶೇಷಾನ್ ವಿಹಿತಾನ್ ಹರೇ ।

ಕ್ಷಮಸ್ವತ್ವಂ ಕ್ಷಮಸ್ವತ್ವಂ
ಶೇಷಶೈಲ ಶಿಖಾಮಣೇ ॥

ಎನ್ನುತ್ತ ದೀರ್ಘದಂಡ ಪ್ರಣಾಮ ಮಾಡಿ, ಒಬ್ಬಾತ ಗರ್ಭಗುಡಿಯಿಂದ ಹೊರಕ್ಕೆ ಬಂದು ಆಲಯ ಸಮೀಪದಲ್ಲಿರುವ ಮಾವಿನಮರದ ನೆರಳಿನಲ್ಲಿ ಕೂತಿದ್ದಾನೆ– ಆನಂದ ಬಾಷ್ಪಗಳನ್ನುತ್ತರೀಯದಿಂದ ಒರೆಸಿಕೊಳ್ಳುತ್ತ –

ಯಾರೀ ತಿರುವೇಂಕಟಾಧೀಶ? ಯಾವುದೀ ಕೃಪಾಮೂರ್ತಿ? ಯಾರೀ ಲಾವಣ್ಯ ಜಲಧಿ?

ಜಲಧಿಕನ್ಯಾಪಾಂಗ ಲಲಿತೇಕ್ಷಣಗಳಲ್ಲಿ ಕರಗಿ ಹೊಳೆಯುವ ಕಜ್ಜಲ ಬಿಂದುವೀತ-ನಿರಬಹುದೇ? ಅಥವ–

ಜಲಜಾಸನಾದಿ ಬೃಂದಾರಕಸಂದೋಹ ವನ್ದಿತ ಚರಣಾರವಿಂದನೇ? ಅಥವ– ತಾಪಸೋತ್ತಮರ ಚಿನ್ತನಾಸೌಧಾನ್ತರ್ಗತ ಸುಜ್ಞಾನ ಜ್ಯೋತಿಯೆ? ಯಾರೀತ?— ಎಂದು ತನ್ನ ಆರಾಧ್ಯದೇವನಾದ, ಪದ್ಮಾ-ರಾಧಿತಪಾದಪದ್ಮನಾದ ಶ್ರೀನಿವಾಸನ ವೈಭವವನ್ನು ಮನಸಾರೆ ಧ್ಯಾನಿಸುತ್ತ– ಕಣ್ಮುಚ್ಚಿ ಕುಳಿತಿರುವ ಈ ಪರಮ ಭಾಗವತೋತ್ತಮ – ಅನ್ನಮಾಚಾರ್ಯ. ಸಂಗೀತ ಪ್ರಪಂಚದಲ್ಲಿ ಅಗ್ರಮಾನ್ಯನಾದ, ಸಂಕೀರ್ತನ ಸಂಪ್ರದಾಯ ಪಿತಾಮಹನಾದ ಮಹಾನ್ ವಾಗ್ಗೇಯಕಾರ. ಶ್ರೀನಿವಾಸನ ಲೀಲಾವಿನೋದಗಳನ್ನು ಬಣ್ಣಿಸುತ್ತ ೩೨ ಸಹಸ್ರ ಕೀರ್ತನೆಗಳನ್ನು ರಚಿಸಿದ ಸಂತ ಕವಿ, ಪರಮ ಭಕ್ತ. ಪರಮ ಭಾವುಕನಾದ ಅನ್ನಮಾಚಾರ್ಯ ಪದಕವಿತಾಪಿತಾಮಹನೆಂದು ಕೀರ್ತಿ ಪಡೆದು, ತನ್ನ ಅನುಪಮ ಕೃತಿಗಳಲ್ಲಿ ಯಶಶ್ಶರೀರಿಯಾಗಿ, ಎಂದೆಂದಿಗೂ ಜೀವಂತವಾಗಿದ್ದಾನೆ. ತನ್ನ ಹದಿನಾರನೇ ವಯಸ್ಸಿನಲ್ಲಿ ಭಗವದ್ದರ್ಶನ ಪಡೆದ ಈ ಸಿದ್ಧಪುರುಷ ಶ್ರೀನಿವಾಸನ ಕೃಪಾಪಾತ್ರನಾದ ಪುನೀತಜೀವಿ.

ದೇಹದ ದಾಹವಣಗಿದಮೇಲೆ ತತ್ತ್ವ ಚಿನ್ತನ ಮಾಡಬಯಸುವ ಜಗತ್ತಿನ ಮೌಢ್ಯ

ಅನ್ನಮಾಚಾರ್ಯ ತನ್ನಲ್ಲಿ ತಾನೇ ಮಾತಾಡಿಕೊಳ್ಳುತ್ತ ಗಂಭೀರವಾಗಿ ಕುಳಿತಿದ್ದಾನೆ – ಧ್ಯಾನಲೀನನಾಗಿದ್ದಾನೆ ಕಿಂ ವಚನೀಯಂ? ಕಿಂ ಅವಚನೀಯಂ? ಎಂಬಂತಿದೆ ಆತನ ಸ್ಥಿತಿ. ಅಷ್ಟರಲ್ಲಿ ಒಬ್ಬಾತ ಅಲ್ಲಿಗೆ ಬಂದ-ಬಹುಶಃ ಅನ್ನಮಾಚಾರ್ಯನನ್ನೇ ಹುಡುಕಿಕೊಂಡು ಬಂದಂತಿದೆ. ಹುಡುಕಿದ ಬೇರು ಎಡವಿದಂತೆ – ಆಚಾರ್ಯರನ್ನು ಕಂಡು ಪರಮ ಭಕ್ತಿಯಿಂದ ನಮಸ್ಕರಿಸಿದ

ತಮ್ಮ ಧ್ಯಾನಕ್ಕೆ ಭಂಗವಾಗಿದ್ದಲ್ಲಿ ನನ್ನನ್ನು ಕ್ಷಮಿಸೋಣವಾಗಬೇಕು–ಆಗಂತುಕನ ಮಾತಿನಲ್ಲಿ ವಿನಯ ತುಂಬಿತ್ತು. ವಯಸ್ಸಿನಲ್ಲಿ ಚಿಕ್ಕವನಾದ ಆತನನ್ನು ಅನ್ನಮಾಚಾರ್ಯ ಆಪಾದಮೌಳಿಪರ್ಯಂತ ದಿಟ್ಟಿಸಿ ನೋಡಿದ.

# ಚೂತವೃಕ್ಷಚ್ಛವಿಯಲ್ಲಿ

ವನ್ನು ಕಂಡು ಆತ ಆಶ್ಚರ್ಯಪಡುತ್ತಿದ್ದಾನೆ. ದಾಹವಣಗುವುದೆಂದು? ತತ್ತ್ವ ದೊರೆಯುವುದೆಲ್ಲಿ? ಶ್ರೀಹರಿಯ ಸಾಕ್ಷಾತ್ಕಾರ ಭಾಗ್ಯ ದೊರಕುವುದಾದರೂ ಹೇಗೆ? ಈಶ್ವರೋನ್ಮುಖವಾದ ಅನುರಾಗವನ್ನು ಭಕ್ತಿಯೆನ್ನುವುದಾದರೆ – ಮಮಾತ್ಮಾ ಸರ್ವಭೂತಾತ್ಮಾ ಎಂಬ ಭಾವನೆಯನ್ನೇನೆನ್ನಬೇಕು? ಸರ್ವಂ ಬ್ರಹ್ಮಮಯಂ – ಎಂಬುದನ್ನು ಕಣ್ಣಾರೆ ಕಂಡು, ಮನಸಾರೆ ಅನುಭವಿಸಿದಾಗ– ಅದನ್ನು ತನ್ಮಯತೆ, ಸಾಕ್ಷಾತ್ಕಾರವೆನ್ನಬಹುದೇ? ಪರಮಯೋಗೀಂದ್ರರಿಗೆ ಭಾವಗೋಚರನಾದ ಶ್ರೀನಿವಾಸನ ಶ್ರೀ ಚರಣಗಳೇ ನನಗೆ ಶರಣ್ಯವಾಗಿರುವಾಗ ಚರ್ಚೆಯೇಕೆ? ಅನುಮಾನವೇಕೆ?

**ವಿದ್ವಾನ್ ಬ. ನ. ಗುಂಡೂರಾವ್**


ಅನ್ನಮಾಚಾರ್ಯ


ಪುರಂದರದಾಸರು

ನೀವು ಯಾರೆಂದು ಕೇಳಬಹುದೆ?

ತಮ್ಮ ದರ್ಶನಕ್ಕಾಗಿ ಬಹುಕಾಲದಿಂದ ಕಾದಿದ್ದವನು.

ಅಂದರೆ?

ತಮ್ಮ ಮಾಧುರ್ಯಪೂರ್ಣವಾದ ಸದ ರಚನಾವೈಖರಿಯನ್ನೂ, ತದಂತರ್ಗತವಾದ, ಸುಮಧುರ, ಸುರಸಂಪೂರ್ಣ–ಭಕ್ತಿರಸಧಾರೆ ಯನ್ನು ಕಂಡು–ಸವಿದು–ಆನಂದಿಸಿದವನು

ಸ್ಪಷ್ಟವಾಗಲಿಲ್ಲ.

ವೈರಾಗ್ಯ ವರ್ಧಕವಾದ ಗಂಭೀರ ಕೃತಿ ಗಳನ್ನು ರಚಿಸಿದ ತಮಗೆ ಭಕ್ತಿ ಪ್ರಣಾಮ ಗಳನ್ನರ್ಪಿಸಲು ಹಾತೊರೆದವನು.

ನೇರವಾಗಿ ಮಾತಾಡಬಾರದೇ?

ಶ್ರೀ ಶ್ರೀನಿವಾಸನ ಸಂಪೂರ್ಣ ಕೃಪೆಗೂ, ದಯೈಕಸಿಂಧುವಾದ ಶೇಷಾದ್ರಿ ಶೇಖರನ ಅನುಗ್ರಹಕ್ಕೂ ಪಾತ್ರರಾದ ತಮ್ಮ ದರ್ಶನ ಭಾಗ್ಯವಿಂದು ಪಡೆದು ಧನ್ಯನಾದವನು.

ಮಾತಿನ ವರಸೆ ಚೆನ್ನಾಗಿದೆ. ಮಾತಿನ ಮರ್ಮ ಬಲ್ಲವರೆಂದೇ ಕಾಣುತ್ತದೆ. ಕಣ್ಣು ಗಳಲ್ಲಿ ಹೊರ ಹೊಮ್ಮುತ್ತ ಹೊಳೆಯು ತ್ತಿರುವ, ಕಮನೀಯ ಪ್ರಭೆ ಕಂಡರೆ, ಅಪರೋಕ್ಷ ಜ್ಞಾನಿಗಳೆಂಬುದು ಸ್ಪಷ್ಟ ವಾಗುತ್ತಿದೆ. ತಮ್ಮ ನಾಮಧೇಯ ಶ್ರವಣ ದಿಂದ ನಾನು ಧನ್ಯನಾಗ ಬಯಸುವುದು ಸೂಕ್ತವಲ್ಲವೇನು?

ಎಂತಹ ಮಾತು–ಗೋವಿಂದ ಗೋವಿಂದ– ತಮ್ಮ ಅಭಿಮಾನಕ್ಕೆ ನಾನು ಚಿರ ಕೃತಜ್ಞ. ತಾವು ನನ್ನೊಡನೆ ಮಾತಾಡಿದ್ದೇ ಒಂದು ಕೃಪೆ. ಅದೇ ಒಂದು ಸೌಭಾಗ್ಯ- ನನ್ನನ್ನು ಪುರಂದರದಾಸನೆಂದು ಕರೆ ಯುತ್ತಾರೆ.''

ಮಣಿಮಾಣಿಕ್ಯಗಳ ವ್ಯಾಪಾರ ಮಾಡುವುದು ಬಿಟ್ಟು ಗೋಪಾಲ, ಜೂಡಾ ಮಣಿಗ ಸರ್ವಸ್ವವನ್ನೂ ಸಮರ್ಪಿಸಿದ ತ್ಯಾಗ ಪುರುಷರು ತಾವು. ಒಂದು ಕಾಲದಲ್ಲಿ ನವಕೋಟಿನಾರಾಯಣ ಬಿರುದಾಂಕಿತರು. ಇಂದು ತಮ್ಮ ದರ್ಶನಭಾಗ್ಯವನ್ನು ಶ್ರೀನಿವಾಸನೇ ಒದಗಿಸಿದ್ದಾನೆ. ಧನ್ಯೋಸ್ಮಿ- ಧನ್ಯೋಸ್ಮಿ

ನಾನು ತಮ್ಮ ಬಗ್ಗೆ ಕೆಲವು ವಿಚಾರ ಗಳನ್ನು ತಿಳಿದುಕೊಳ್ಳ ಬಯಸುತ್ತೇನೆ. ಕೃಪೆ ಮಾಡಿ ತಿಳಿಸೋಣವಾಗಬೇಕು.

ನಾನೇನೂ ಅಷ್ಟು ದೊಡ್ಡವನಲ್ಲ. ಆದರೆ ತಮ್ಮ ಅಭಿಪ್ರಾಯವನ್ನು ತಳ್ಳಿ ಹಾಕುವಷ್ಟು ಧೈರ್ಯವೂ ಇಲ್ಲ. ಅಪ್ಪಣೆ ಯಾದರೆ ನನ್ನ ಅಲ್ಪ ಮತಿಗೆ ತೋಚಿದ್ದನ್ನು ಹೇಳುತ್ತೇನೆ.

ಪೂರ್ವಾಶ್ರಮದ ಬಗ್ಗೆ ಏನಾದರೂ ತಿಳಿಸಲಿಷ್ಟಪಡುವಿರಾ?

ಆ ಕಾಲದ ಬಾಳೆಲ್ಲ ನಾಟಕ. ಈಗ ಬೇಕಾದ್ದು ಕೈವಲ್ಯ. ನನ್ನ ವಿಚಾರ ತಿಳಿದು ಕೊಳ್ಳಲು ನಿಮಗೇಕಿಷ್ಟು ಕುತೂಹಲ?

ಹಿರಿಯರ ವಿಷಯ ತಿಳಿಯಲು ಕಿರಿಯರಿಗೆ ಕುತೂಹಲ ಸಹಜ. ಆ ಮಾತು ಹಾಗಿರಲಿ. ತಮ್ಮ ತಂದೆ ತಾಯಿ ಯಾರು?

ನನ್ನ ತಂದೆಯ ಹೆಸರು ನಾರಣಯ್ಯ. ತಾಯಿ ಲಕ್ಕಮಾಂಬ. ಈಗಂತೂ ನನ್ನ ತಂದೆ ತಾಯಿ ಎಲ್ಲವೂ ಶ್ರೀನಿವಾಸನೆ ನಾನು ಬಹು ಚಿಕ್ಕಂದಿನಲ್ಲೇ ತಂದೆಯನ್ನು ಕಳೆದು ಕೊಂಡು ತಾಯಿಯ ಅಕ್ಕರೆಯ ಮಡಿಲಲ್ಲೇ ಬೆಳೆದವನು.

ನನ್ನ ಗುರುಗಳಾದ ವ್ಯಾಸರಾಯ ಸ್ವಾಮಿಗಳು ನಿಮ್ಮ ಬಗ್ಗೆ ಆಗಾಗ ಹೇಳುತ್ತಿದ್ದರು.

ಯಾರು– ವ್ಯಾಸರಾಯಸ್ವಾಮಿಗಳೇ? ಆ ಪೂಜ್ಯರು ನನ್ನ ವಿಷಯ ಹೇಳುತ್ತಿದ್ದರೇ? ಅವರ ದರ್ಶನ ಭಾಗ್ಯ ಲಭ್ಯವಾದದ್ದೇ ಒಂದು ಸೌಭಾಗ್ಯ. ಅದೆಂದೂ ಮರೆಯಲಾಗದ ಸುದಿನ.

ಹೌದಂತೆ. ಅವರೂ ಹಾಗೇ ಹೇಳುತ್ತಿದ್ದರು. ನೀವು ಜೋಗುಳ ಹಾಡುತ್ತಿದ್ದಿರಂತೆ, ಲೀಲಾವಿನೋದಿಯಾದ ಶ್ರೀಹರಿ, ಬಾಲಗೋಪಾಲನಾಗಿ ತೊಟ್ಟಿಲಲ್ಲಿ ಮಲಗಿ, ನಿಮ್ಮ ಗಾನಾಮೃತ ಕೇಳಿ ಆನಂದಿಸುತ್ತ, ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ನಸುನಗುತ್ತಿದ್ದನಂತೆ. ನಮ್ಮ ಗುರುಗಳು ಆ ದಿವ್ಯ ಸುಂದರ ದೃಶ್ಯವನ್ನು ಕಂಡು ಪುಲಕಿತರಾದರಂತೆ. ಇದನ್ನವರು ಪದೇಪದೆ ಹೇಳುತ್ತಿದ್ದರು

ಎಲ್ಲವೂ ಆತನ ಕರುಣೆ–ಆತನ ಅನುಗ್ರಹ.

ತಮ್ಮ ಮನಸ್ಸಿಗೆ ನೋವಾಗುವಂತಹ ಘಟನೆಗಳು ಜೀವನದಲ್ಲಿ ಯಾವುದಾದರೂ ನಡೆದಿವೆಯೆ?— ಈ ಪ್ರಶ್ನೆಗೆ ತಾವು ಬೇಸರಪಟ್ಟುಕೊಳ್ಳಬಾರದು.

ಜೀವನದಲ್ಲಿ ದುಃಖದ ಅಂಶ ಸಾಗರದಷ್ಟು ಸುಖದ ಅಂಶ ಸಾಸುವೆಯಷ್ಟು. ಅದೂ ಸಹ ತಾತ್ಕಾಲಿಕ ಹಾಗೂ ದುಃಖ ಮಿಶ್ರಿತ. ದುಃಖದ ಲೇಶವಿಲ್ಲದ ಶುದ್ಧ ಸುಖವೆಂಬುದು ಜಗತ್ತಿನಲ್ಲಿ ಯಾವುದಿದೆ? ಪಡುವ ನೋವೆಲ್ಲ ಬಾಳೆಂಬ ಸಾಧನೆಯ ಒಂದಂಶವೆಂದು ಭಾವಿಸಿಕೊಂಡರಾಯ್ತು. ವಸ್ತುತಃ ನೋವೆಂದರೇನು – ನಲಿವೆಂದರೇನು ?– ಮನಸ್ಸು ಹೇಗೆ ಭಾವಿಸಿಕೊಂಡರೆ ಹಾಗೆ.

ವಿಜಯನಗರದ ಸಾಳ್ವನರಸಿಂಹರಾಯ ತಮಗೆ ತುಂಬ ಅಪಚಾರ ಮಾಡಿದ್ದನಂತೆ ..

ವ್ಯಕ್ತಿ ತನ್ನ ಅಭಿಪ್ರಾಯಕ್ಕೆ ಮನ್ನಣೆ ದೊರೆಯದೆ ಹೋದಾಗ ಅಸಮಾಧಾನ ಮಾಡಿಕೊಳ್ಳುತ್ತಾನೆ ಅದು ಅಪಕ್ವ ಬುದ್ಧಿಯ ಲಕ್ಷಣ. ಆಳರಸರು ಅಸಮಾಧಾನ ಪಟ್ಟಾಗ ಇತರರಿಗೆ ಶಿಕ್ಷೆ ವಿಧಿಸುತ್ತಾರೆ. ಇದು ಅದರ ಅಧಿಕಾರ ದರ್ಪದ ಲಕ್ಷಣ. ಸಾಳ್ವ ನರಸಿಂಹರಾಯ ನನ್ನನ್ನು ಸೆರೆಮನೆಯಲ್ಲಟ್ಟಿದ್ದ ನಾನು ಮಾಡಿದ ಅಪರಾಧವೇನು ಗೊತ್ತೇ? ನನ್ನ ಕೃತಿಗಳನ್ನು ರಾಜನಿಗೆ ಅಂಕಿತಮಾಡುವುದು ಸೂಕ್ತವಲ್ಲವೆಂಬ ಅಭಿಪ್ರಾಯವನ್ನು ನಿರ್ಭಯವಾಗಿ ಸೂಚಿಸಿದ್ದು. ಕಾರಾಗೃಹವಾಸ ನನಗೊಂದು ಸಾಧನ ಭೂಮಿಯಾಯ್ತು – ಆ ಕಥೆ ಬೇರೆ.

ತಮ್ಮ ಸ್ಥಳ ಕಡಪಮಂಡಲದ ತಾಳ್ಳಪಾಕಂ ಎಂಬ ಗ್ರಾಮವೆಂದು ಕೇಳಿದ್ದೇನೆ ಆ ಪ್ರಾಂತವೆಲ್ಲ ಚಂದ್ರಗಿರಿಯ ರಾಜರ ವಶದಲ್ಲಿತ್ತಲ್ಲವೇ?

ಹೌದು ಚಂದ್ರಗಿರಿಯರಸರು–ಸೇನಾಪತಿಗಳು...ಎಲ್ಲರೂ ನನಗೆ ಪರಿಚಿತರಾಗಿದ್ದವರು. ಸೇನಾಧ್ಯಕ್ಷನಾದ ನರಸನಾಯಕ ತನ್ನ ಪತ್ನಿಯಾದ ನಾಗಲಾಂಬೆಯ ಸಹಿತ ಪೆನುಗೊಂಡೆಗೊಂದು ಸಲ ಬಂದಿದ್ದ.

ತಾವು ಪೆನುಗೊಂಡಯಲ್ಲಿದ್ದಿರೇನು?

ಸಾಳ್ವರಾಜನ ಕೃಪೆ, ನಾನು ಬಂಧನದಲ್ಲಿದ್ದುದೇ ಪೆನುಗೊಂಡೆಯಲ್ಲಿ. ಸೇನಾಪತಿ ದಂಪತಿಗಳು ನನ್ನನ್ನು ಕಾಣಲೆಂದು ಕಾರಾಗೃಹಕ್ಕೇ ಬಂದಿದ್ದರು. ಆಗ ಅವರ ಚಿರಂಜೀವಿಯೂ ಬಂದಿದ್ದ ಅವನನ್ನು ನಿಮ್ಮ ಗುರುಗಳಾದ ವ್ಯಾಸರಾಯಸ್ವಾಮಿಗಳು ಪರಮ ಕರುಣೆಯಿಂದ ಕಾಪಾಡಿದರೆಂದು ಕೇಳಿದ್ದೆ

ಗುರುಗಳು ಕಾಪಾಡಿದ್ದು ವಿಜಯನಗರಾಧೀಶ್ವರನಾದ ಸಂಗೀತಸಾಹಿತ್ಯಕಲಾಪೋಷಕನಾದ – ದಿಗಂತ ವಿಶ್ರಾಂತ ಕೀರ್ತಿಸಂಪನ್ನನಾದ – ಕೃಷ್ಣದೇವರಾಯರನ್ನಲ್ಲವೇ?

ನಾನೂ ಅದೇ ಹೇಳುತ್ತಿರುವುದು. ನಾನವನನ್ನು ಕಂಡಾಗ ಅವನಿನ್ನೂ 6–7 ವರ್ಷದ ಹುಡುಗ ವಿಖ್ಯಾತ ಸಾಮ್ರಾಜ್ಯಕ್ಕಧಿಪತಿಯಾಗುವನೆಂಬ ಕಲ್ಪನೆಯೂ ಆಗ ಬಂದಿರಲಾರದು. ಆದರೆ ಅವನು ಲೋಕಪ್ರಸಿದ್ಧ ಚಕ್ರವರ್ತಿಯಾಗುತ್ತಾನೆಂದು– ನಾನಾ ಬಾಲಕನ ಭವಿಷ್ಯವನ್ನಂದೇ ಕಂಡಿದ್ದೆ. ಅವರ ತಂದೆ ತಾಯಿಗೆ ಹೇಳಿಯೂ ಇದ್ದೆ . ಆಯ್ತು. ಅದೆಲ್ಲ ಒಂದು ಕಾಲ. ಈಗ ನನಗದರಿಂದ ಆಗಬೇಕಾದ್ದೇನೂ ಇಲ್ಲ.

ಆಚಾರ್ಯರು ಮನ್ನಿಸಬೇಕು. ತಮ್ಮ ಪದಕವಿತಾ ಲಾಲಿತ್ಯಕ್ಕೆ, ಶಬ್ದ ಪ್ರವಾಗ ಪ್ರೌಢಿಮೆಗೆ ಸುಕುಮಾರ ಭಾವಪೋಷಣೆಗೆ, ಆದ್ಯಂತವಾಗಿ ಪ್ರವಹಿಸುವ ಭಕ್ತಿರಸಧಾರೆಗೆ–ತನ್ಮಯತೆಗೆ–ಪರಿಪೂರ್ಣ ಆನಂದಾನುಭವಕ್ಕೆ ಮಾರುಹೋದ ಸಾವಿರಾರು ಮಂದಿಯಲ್ಲಿ ನಾನೂ ಒಬ್ಬ. ನನ್ನ ಒಂದು ಮನವಿ ಸನ್ನಿಧಾನದಲ್ಲಿ ವಿಜ್ಞಾಪಿಸಬೇಕೆಂದು ಬಾಲಕ ಸಹಜವಾದ ಚಾಪಲ್ಯ ಎದೆ

ವಿನಯದರಮನೆಗೆ ಸೌಜನ್ಯದ ಕಳಶವಿಟ್ಟಂತಿದೆ–ನಿಮ್ಮ ಮಾತು. ಅಭಿಪ್ರಾಯವೇನೆಂದು ಸ್ಪಷ್ಟಪಡಿಸಿದರೆ ಕೇಳಿ ಧನ್ಯನಾಗುತ್ತೇನೆ.

ನಿಮ್ಮ ಕವಿತೆಗಳ ಪ್ರಭಾವ ನನ್ನ ಕೃತಿಗಳ ಮೇಲೆ ಬಿದ್ದರೆ–ನಾನು ನಿಮ್ಮ ಅಮೂಲ್ಯ ಕೃತಿಗಳಿಂದ ಭಾವ ಗ್ರಹಣ ಮಾಡಿದರೆ ಅದು ತಮಗೆ ಅಸಮಾಧಾನವಾಗಲಾರದಷ್ಟೆ?

ದಯಾನಿಧಿಯಾದ ದಾಸವರೇಣ್ಯರೇ, ಅದೆಂತಹ ಮಾತು? ಭಾಷೆ ಮಾನವ ನಿರ್ಮಿತ. ಭಾವನೆಗಳು ದೇವ ನಿರ್ಮಿತ. ದೈವೀಭಾವನೆಗಳು ಯಾರೊಬ್ಬರ ಸ್ವತ್ತೂ ಅಲ್ಲ. ಅದಕ್ಕೆ ಭಾಷಾ ಬಂಧನವೂ ಇಲ್ಲ ಯಾರ್ಯಾರು ಯಾವ್ಯಾವ ಪಾತ್ರವನ್ನು ವಹಿಸಬೇಕು–ಹೇಗೆ ನಿರ್ವಹಿಸಬೇಕು–ಎಂಬುದೆಲ್ಲ ಪೂರ್ವ ನಿಶ್ಚಿತ ಸಂಗತಿಗಳು. ಭಾವಗ್ರಹಣವೆಂದಾಗ ನಾನೇಕೆ ಅಸಮಾಧಾನ ಪಡಬೇಕು? ಅನ್ತರಂಗದಲ್ಲೂ ಬಹಿರಂಗದಲ್ಲೂ, ಭಾವದಲ್ಲೂ, ಬಾಹ್ಯದಲ್ಲೂ ಭಗವಂತನನ್ನು ಕಾಣುವುದು ತಾನೆ ಎಲ್ಲ ಶಾಸ್ತ್ರಗಳ – ಎಲ್ಲ ಸಂಗೀತದ–ಎಲ್ಲ ಸಾಹಿತ್ಯದ ಮೂಲಗುರಿ-ಮುಖ್ಯ ತತ್ತ್ವ?

ಮಹಾತ್ಮರೇ– ತಮ್ಮ ಅಮೂಲ್ಯ ಸಲಹೆಗೆ,ಮಾರ್ಗದರ್ಶನಕ್ಕೆ ನಾನು ಕೃತಜ್ಞನಾಗಿದ್ದೇನೆ. ತಾವು ದೇಶಾಕ್ಷಿರಾಗದಲ್ಲಿ ಬರೆದಿರುವ ದಿವ್ಯ ಕವಿತೆ–ನೀವೇ ನೇರವುಕಾನಿ–ಎಂಬ ಕವಿತೆ ನನ್ನನ್ನು ಬಹುವಾಗಿ ಆಕರ್ಷಿಸಿದೆ. ಅದರ ಒಂದು ಚರಣವಂತೂ ನನ್ನ ಮೇಲೆ ಬಹುವಾಗಿ ಪ್ರಭಾವ ಬೀರಿದೆ.

ಯಾವುದಾಚರಣ?

ಚೆರುವಲ ನೀಳ್ಳು ತೆಚ್ಚಿ
ಚೇರೆಡು ನೀ ಪೈಚೆಲ್ಲಿ
ವರಮು ವೊಂದಿತಿಮಿ ವಲಸಿನಟ್ಟು।
ನೀವು ನಿರ್ಮಿಂಚಿನದಿ ನೀಕೇ
ಸಮರ್ಪಣ ಜೇಸಿ
ಸೋವಲ ನೀ ಕೃಪಯೆಲ್ಲ
ಜೊರಗೊಂಟಿಮಿ”

ತಮ್ಮ ಕವಿತೆಯ ಅಭಿಪ್ರಾಯವನ್ನು ನಾನು ಕನ್ನಡ ಭಾಷೆಯಲ್ಲಡಗಿಸಿದ್ದೇನೆ–

“ಕೆರೆಯ ನೀರನು ಕೆರೆಗೆ ಚೆಲ್ಲಿ
ವರವಪಡೆದವರಂತೆ ಕಾಣಿರೊ
ಹರಿಯ ಕರುಣದೊಳಾವ ಭಾಗ್ಯವ
ಹರಿಸಮರ್ಪಣೆ ಮಾಡಿ ಬದುಕಿರೊ”।

ನಿಮ್ಮ ಕವಿತೆ-ಇಷ್ಟುಬಿಟು ಕಲಗಂಟಿಯೆಂಬುದರಭಿಪ್ರಾಯವನ್ನು – ಕಂಡೆ ನಾಕನಸಿನಲಿ ಗೋವಿಂದನ – ಎಂದು ರೂಪಿಸಿದ್ದೇನೆ. ನನ್ನ ಆರಾಧ್ಯ ದೇವನಾದ ಶ್ರೀಕೃಷ್ಣನನ್ನು ನವ ರತ್ನಗಳಿಗೆ ಹೋಲಿಸಿ ರಚಿಸಿರುವ ಕವಿತೆಯಂತೂ ತಮ್ಮ ದಿವ್ಯ ಪ್ರತಿಭೆಗೆ ಸಮುಜ್ವಲ ಸಾಕ್ಷಿಯಾಗಿದೆ.

ಯಾವುದಾಗೀತೆ? ನಾನೇ ಮರೆತಿದ್ದೇನೆ ಮರೆವು ವಯಸ್ಸಿನ ಪರಿಣಾಮವಿರಬಹುದು

ಆ ದಿವ್ಯ ಕವಿತೆಯ ಭಾವ ಹೀಗಿದೆ— ಶ್ರೀಕೃಷ್ಣನೆಂದರೇನು? ಈ ದೇವಕೀಸುತ ಮುದ್ದು ಯಶೋದೆಯ ಮುಂದೆ ನಿಂತಿರುವ ಆಣಿಮುತ್ತು. ಗೋಪಾಂಗನೆಯರ ಅಂಗೈಯಲ್ಲಿರುವ ಮಾಣಿಕ್ಯ. ಸಂತ ಹಾಕಿನಿಂತ ಕಂಸನಿಗೆ ವಜ್ರ. ಮೂರು ಲೋಕದ ಲಲನಾಮಣಿಯರು ಪಡೆಯ ಬಯಸುವ ಪಚ್ಚೆ. ವಿಲಾಸವೇಳೆಯಲ್ಲಿ ಹವಳದುಟಿಯ ರುಕ್ಮಿಣಿಗೆ ಈತ ಹವಳ ಗೋವರ್ಧನದ ಮೇಲೊಂದು ಗೋಮೇಧಿಕವೀತ. ಈತ ಶಂಖಚಕ್ರ ಧರಿಸಿದ ವೈಡೂರ್ಯ ವಿಗ್ರಹ. ಕಾಳಿಂಗನ ಹೆಡೆಯಮೇಲೆ ಹೊಳೆಯುವಂತಹ ಪುಷ್ಯರಾಗ ಅಷ್ಟೇ ಅಲ್ಲ. ವೇಂಕಟಾದ್ರಿಯ ಮೇಲೆ ಮೆರೆಯುವ ಇಂದ್ರ ನೀಲಮಣಿ ವಿಗ್ರಹ. ಈತ – ಕ್ಷೀರಾಬ್ಧಿ ಮಥನ ಕಾಲದಲ್ಲಿ ಬಂದ ಸಣ್ಣ ಸಣ್ಣ ಮಣಿ ಮಾಣಿಕ್ಯಗಳಂತಲ್ಲ.

ಹೌದು, ಕವಿತೆ ಈಗ ನೆನಪಾಗುತ್ತಿದೆ. ಅದು ನಾನು ಕಂಡ ದೃಶ್ಯ. ಬಾಲ ಮುಕುಂದನನ್ನು ವಿವಿಧ ರೂಪಗಳಲ್ಲಿ–ವಿವಿಧ ಭಂಗಿಗಳಲ್ಲಿ ಕಂಡು ಧನ್ಯನಾಗಿದ್ದೇನೆ. ಅದು ಹಾಗಿರಲಿ, ನೀವು ಕರ್ನಾಟಕ ಸಂಗೀತ ಸಂಪ್ರದಾಯಕರು. ನೀವು ರಚಿಸಿದ ಪಿಳ್ಳಾರಿಗೀತೆಗಳನ್ನು ಎಲ್ಲ ಸಂಗೀತಾಭ್ಯಾಸಿಗಳೂ ಕಲಿಯಲೇಬೇಕು. ಸಂಗೀತ ಶಿಕ್ಷಣಕ್ಕೆ ಬುನಾದಿಹಾಕಿದ ವಿದ್ವಾಂಸರು ತಾವು.

ತಮ್ಮ ಅಭಿಮಾನಕ್ಕೆ ಕೃತಜ್ಞನಾಗಿದ್ದೇನೆ. ಭಾವಗ್ರಹಣದ ವಿಚಾರದಲ್ಲಿ ತಾವು ನನ್ನ ಮನಸ್ಸಿಗೆ ಧೈರ್ಯ ದಾನಮಾಡಿದಿರಿ. ತಮ್ಮ ಸೌಜನ್ಯಕ್ಕೆ ನಾನು ಆಭಾರಿ.

ವೆಂಕಟೇಶ – ತಿರುವೇಂಕಟಾಧೀಶ ಇತ್ಯಾದಿ ಅಂಕಿತಗಳಲ್ಲಿ ಕೀರ್ತನೆ ಬರೆಯಬೇಕೆಂದು ನನಗೆ ಅಪ್ಪಣೆಯಾಯ್ತು. ಪುರಂದರ ವಿಠಲನೆಂಬ ಅಂಕಿತದಲ್ಲಿ ಕೀರ್ತನೆ ರಚಿಸಬೇಕೆಂದು ನಿಮಗೆ ಆಜ್ಞೆಯಾಗಿದೆ. ಶ್ರೀನಿವಾಸನ ಅಪ್ಪಣೆಯಂತೆ ನಡೆಯುವುದಷ್ಟೇ ನಮ್ಮ ಕೆಲಸ ನಾವೆಲ್ಲ ಪಾತ್ರಧಾರಿಗಳು. ಆತನೇ ಸೂತ್ರಧಾರಿ. ಆತನ ನಾಟಕ ಚೆನ್ನಾಗಿ ಸಾಗಬೇಕಾದರೆ, ಪಾತ್ರಗಳಿಗೆ ಆತನೇ ಮಾತು ಕಲಿಸುತ್ತಾನೆ. ಅಲ್ಲವೇ ದಾಸವರ್ಯರೇ?

ಹೌದು ಆಚಾರ್ಯ ಆ ಸರ್ವಶಕ್ತಿಗೆ ಕೋಟಿ ನಮನಗಳು.

ಮಾತಾಡುತ್ತಿರುವವರಲ್ಲಿ ಅನ್ನಮಾಚಾರ್ಯರು ಸುಮಾರು ಎಂಭತ್ತು ವಯಸ್ಸಿನವರು, ಪುರಂದರದಾಸರು ಸುಮಾರು ಅರ್ಧ ಶತಮಾನದವರು. ವಾಗ್ಗೇಯಕಾರ ಶಿಖಾಮಣಿಗಳಿಬ್ಬರ ಈ ಮಾತುಕತೆ ನಡೆದದ್ದು ಶತಮಾನಗಳ ಹಿಂದೆ. ಈ ಮಧ್ಯೆ ರಾಜ್ಯ ಸಾಮ್ರಾಜ್ಯಗಳುರುಳಿಹೋಗಿರಬಹುದು. ಜೀವನದ ಮೌಲ್ಯಗಳು ಮಾರ್ಪಾಟಾಗಿರಬಹುದು. ಆದರೇನಂತೆ? ಈ ಮಹಾತ್ಮರಿಬ್ಬರೂ ಅಮರಜೀವಿಗಳು, ಧನ್ಯಾತ್ಮರು. ಸಂಗೀತ ಜಗತ್ತಿನ ದಿವಾಕರ ಸುಧಾಕರರು. ಪ್ರಾತಃಸ್ಮರಣೀಯರಾದ ಪುಣ್ಯಜೀವಿಗಳು.



# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ,

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ ದೇ. ತಿರುಪತಿ.

# ವಾರ್ತಾಲಹರಿ

## ವಿದೇಶೀ ದೇವಾಲಯಗಳಿಗೆ 12.26 ಲಕ್ಷ ರೂಗಳ ಅನುದಾನ

ತಿರುಮಲೆ ತಿರುಪತಿ ದೇವಸ್ಥಾನಗಳು ತನ್ನ ತನ್ನ 'ವಿದೇಶೀ ಹಿಂದೂ ದೇವಾಲಯಗಳ ನೆರವು' ಯೋಜನೆಯನ್ವಯ 12.26 ಲಕ್ಷ ರೂಗಳ ಅನುದಾನವನ್ನು ಮಂಜೂರು ಮಾಡಿದೆ.

ಪತ್ರಿಕಾ ಗೋಷ್ಠಿಯೊಂದರಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅವರು ಮಾತನಾಡುತ್ತ ಈ ಮೊತ್ತದಲ್ಲಿ ಲಾಸ್ ಏಂಜಲ್ಸ್‌ನ ಹಿಂದೂ ಟೆಂಪಲ್ ಸೊಸೈಟಿಗೆ 5 ಲಕ್ಷ ರೂಗಳೂ, ಸ್ಯಾನ್ ಫ್ರಾನ್ಸಿಸ್ಕೋನ ಹಿಂದೂ ಟೆಂಪಲ್ ಸೊಸೈಟಿಗೆ 1.26 ಲಕ್ಷ ರೂಗಳೂ, ಸಿಡ್ನಿಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಕ್ಕೆ 6 ಲಕ್ಷ ರೂಗಳೂ ಸಲ್ಲುತ್ತವೆ ಎಂದು ತಿಳಿಸಿದರು.

ತಿ. ತಿ. ದೇ. ಬೋರ್ಡ್ ಸಭೆಯ ಬಗ್ಗೆ ವಿವರಿಸುತ್ತ ಶ್ರೀಯುತರು ತಿ. ತಿ ದೇ ಗಳ ಆಯವ್ಯಯ ಲೆಕ್ಕ ಹಾಗೂ ಲೆಕ್ಕ ಪರಿಶೀಲನೆಗಳನ್ನು ಹೆಚ್ಚು ಬಲಗೊಳಿಸುವ ಕ್ರಮಗಳನ್ನು ಕೈಗೊಳ್ಳಲಾಗುತ್ತದೆಯೆಂದರು. ಈ ಬಗ್ಗೆ ಕೈಗೊಂಡ ಒಂದು ನಿರ್ಣಯದಂತೆ ಆಂಧ್ರ ಪ್ರದೇಶದ ಅಕೌಂಟೆಂಟ್ ಜನರಲ್ ಅವರಿಂದ ಪಶ್ಚಾತ್ ಲೆಕ್ಕ ಪರಿಶೀಲನೆ ನಡೆಸಲು ಆಂಧ್ರಪ್ರದೇಶ ಸರ್ಕಾರವನ್ನು ಕೋರಲಾಗಿದೆ. ಈಗ ಪೂರ್ವೋತ್ತರ ಲೆಕ್ಕ ಪರಿಶೀಲನೆಗಳೆರಡೂ ಲೋಕಲ್ ಫಂಡ್ ಆಡಿಟ್ ಇಲಾಖೆಯಿಂದ ನಡೆಯುತ್ತಿದೆ. ಲೆಕ್ಕಾಚಾರ ಯಂತ್ರಾಂಗವನ್ನು ಪರಿಶೀಲನೆ/ಮರುಪರಿಶೀಲನೆಗಳಿಂದ ಸುವ್ಯವಸ್ಥಿತಗೊಳಿಸುವ ತಿ. ತಿ. ದೇ. ಗಳ ಅಪೇಕ್ಷೆಯನ್ನು ಅಧ್ಯಕ್ಷರು ವಿವರಿಸಿದರು.

ಈ ನಿರ್ಣಯವು ಆಂಧ್ರಪ್ರದೇಶದ ಪಬ್ಲಿಕ್ ಅಕೌಂಟ್ಸ್ ಕಮಿಟಿಯ ಈಚಿನ ಶಿಫಾರಸಿನ ಫಲವಾಗಿದೆ. ತಿ. ತಿ. ದೇ ಗಳ ಎಲ್ಲ ವಿಭಾಗಗಳ ಆಯವ್ಯಯಗಳ ಬಗ್ಗೆ ನಿಘಾ ಇಡಲು ತಿ ತಿ. ದೇ. ಗಳಿಂದ ಸ್ವತಂತ್ರವಾದ ಒಂದು ವಿಭಾಗವನ್ನುಂಟು ಮಾಡಲು ಅಪೇಕ್ಷಿಸಲಾಗಿದೆ ಎಂದು ಅವರು ತಿಳಿಸಿದರು.

1985–86 ರ ಆಯವ್ಯಯ ಅಂದಾಜು ಪತ್ರವನ್ನು ಒಪ್ಪಲಾಗಿದ್ದು ಮುಂದಿನ ಒಂದು ವರ್ಷದಲ್ಲಿನ ಆಯ 46.76 ಕೋಟಿ ರೂಗಳು ಹಾಗೂ ವೆಚ್ಚ 39 58 ಕೋಟಿ ರೂಗಳೆಂದೂ ಅಂದಾಜು ಮಾಡಲಾಗಿದೆ ಎಂದೂ ಅವರು ತಿಳಿಸಿದರು.

## ತಿರುಪತಿಯಲ್ಲಿ ಒಳಚರಂಡಿ ಅನುಕೂಲ

ತಿರುಪತಿಯಲ್ಲಿನ ಸಾರ್ವಜನಿಕ ಆರೋಗ್ಯದ ಗುಣ ಮಟ್ಟವನ್ನು ಹೆಚ್ಚಿಸಲು ಒಳಚರಂಡಿ ಯೋಜನೆಯನ್ನು ಇನ್ನು ಆರು ತಿಂಗಳೊಳಗೆ ಕೈಗೊಳ್ಳಲಾಗುವುದು.

ತಿ. ತಿ. ದೇ. ಗಳ ಸ್ವರ್ಣೋತ್ಸವದಲ್ಲಿ ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಪ್ರಕಟಿಸಿದ್ದ ಯೋಜನೆಯನ್ನು ಕಾರ್ಯಗತಗೊಳಿಸಲು 3 ಲಕ್ಷ ರೂಗಳನ್ನು ಬಿಡುಗಡೆಮಾಡಲಾಗಿದೆಯೆಂದು ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ವೈ. ಯತಿರಾಜರಾವ್ ಅವರು ತಿಳಿಸಿದರು.

ತಿ. ತಿ. ದೇ. ಗಳಿಗೆ ಬದಲಿಯಾಗುವ ಸಾರ್ವಜನಿಕ ಆರೋಗ್ಯ ತಜ್ಞರ ತಂಡವು ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತದೆ ಎಂದು ತಿಳಿಸಿದ ಮಂತ್ರಿಗಳು ತಿರುಪತಿಯಲ್ಲಿನ 65 ಲಕ್ಷ ರೂಗಳ ಬಳಸು ರಸ್ತೆಯ ಕೆಲಸವನ್ನೂ ಶೀಘ್ರವೇ ಕೈಗೆತ್ತಿಕೊಳ್ಳಲಾಗುತ್ತದೆ ಎಂದರು.

## ಶ್ರೀ ಮಲಯಾಳ ಸ್ವಾಮಿಗಳ ಶತಮಾನೋತ್ಸವ

ತಿರುಪತಿಯ ಸಮೀಪದ ಏರ್ಪೇಡುವಿನ ವ್ಯಾಸಾಶ್ರಮದಲ್ಲಿ ಮಾರ್ಚ್ 28 ರಿಂದ ಐದು ದಿನಗಳ ಕಾಲ ಶ್ರೀ ಮಲೆಯಾಳಸ್ವಾಮಿಗಳ ಜನ್ಮ ಶತಾಬ್ದಿಯನ್ನು ಯಶಸ್ವಿಯಾಗಿ ಆಚರಿಸಲಾಯಿತು.

ಕೇರಳದಲ್ಲಿ ಹುಟ್ಟಿದ ಸದ್ಗುರು ಶ್ರೀ ಮಲೆಯಾಳ ಸ್ವಾಮಿಗಳು ಆಂಧ್ರಪ್ರದೇಶದ ಅನೇಕ ಕಡೆಗಳಲ್ಲಿ ಆಶ್ರಮಕ್ಕೆ ಹೊಂದಿರುವ ಅನೇಕ ಸಂಸ್ಥೆಗಳನ್ನು ಸ್ಥಾಪಿಸಿದರು. ಅರ್ವಾಚೀನ ಕಾಲದ ಶ್ರೇಷ್ಠ ಆಧ್ಯಾತ್ಮಿಕ ಸಂತರಲ್ಲಿ ಒಬ್ಬರಾದ ಶ್ರೀ ಮಲೆಯಾಳ ಸ್ವಾಮಿಗಳ ವಿಶೇಷ ಗುಣಗಳಿಂದಾಗಿ ಸಹಸ್ರಾರು ಮಂದಿ ಅವರ ಶಿಷ್ಯರಾದರು. ಹಿಂದುಳಿದವರ ದೀನ ದುಃಖಿಗಳ ಸೇವೆಗಾಗಿ ಅಹರ್ನಿಶಿ ದುಡಿದು, ಶ್ರೀ ಮಲಯಾಳಸ್ವಾಮಿಗಳು 1962 ರಲ್ಲಿ ಭೌತಿಕ ಕಾಯವನ್ನು ತೊರೆದರು.

ಶತಮಾನೋತ್ಸವಗಳಲ್ಲಿ ಸನಾತನ ಧರ್ಮದ ಸೀಮೆಯಲ್ಲಿ ಪ್ರಸಿದ್ಧರಾದ ಸಂತರು, ಪೀಠಾಧಿಪತಿಗಳು ಉಪನ್ಯಾಸಗಳನ್ನು ನೀಡಿದರು. ಹಲವಾರು ಧಾರ್ಮಿಕ ಕೃತಿಗಳ ಬಿಡುಗಡೆಯಾಗಿ ಎಲ್ಲರಿಂದಲೂ ಮೆಚ್ಚುಗೆ ಗಳಿಸಿತು. ಉತ್ಸವಗಳಿಂದ ಒಟ್ಟಾರೆಯಾಗಿ ಇಂದಿನ ದೈನಂದಿನ ಅವಸರದ ನಾಗರಿಕತೆಯ ನಡುವೆ ತುಸು ವಿಶ್ರಾಮ ದೊರೆತಂತಾಗಿ, ನಮ್ಮ ಸಾಂಸ್ಕೃತಿಕ ಪರಂಪರಾಗತ ವೈಭವ ಮನಮುಟ್ಟುವಂತಾಯಿತು

## ಅನ್ನಮಾಚಾರ್ಯರ 482 ನೆಯ ವರ್ಧಂತಿ

ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ 18–3–85 ರಿಂದ 24–3–85ರ ವರೆಗೆ ಸರ್ವ ಜನಾಕರ್ಷಕವಾಗಿ ಅನ್ನಮಾಚಾರ್ಯರ 482 ನೆಯ ವರ್ಧಂತಿ ಉತ್ಸವವನ್ನು ಆಚರಿಸಲಾಯಿತು.

18 ರ ಬೆಳಗ್ಗೆ ನಗರ ಸಂಕೀರ್ತನೆ, ತಿ.ತಿ.ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರ ನೇತೃತ್ವದಲ್ಲಿ ಅನ್ನಮಾಚಾರ್ಯ ಕಲಾಮಂದಿರವನ್ನು ತಾಳ ವಾದ್ಯ ಭಜನೆಗಳೊಂದಿಗೆ ಸೇರಿತು ಈ ಮೆರವಣಿಗೆಯಲ್ಲಿ ಆಂಧ್ರಪ್ರಭ ವಾರಪತ್ರಿಕೆಯ ಸಂಪಾದಕ ಪೊತ್ತೂರಿ ವೆಂಕಟೇಶ್ವರರಾವ್ ಅವರೂ ಸೇರಿದಂತೆ ಅನೇಕ ಗಣ್ಯರು ಪಾಲುಗೊಂಡಿದ್ದರು.

ಅಂದು ಸಂಜೆ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಉತ್ಸವವನ್ನು ಆರಂಭಿಸಿದರು ಅನ್ನಮಾಚಾರ್ಯರ ಕೃತಿಗಳನ್ನು ಜನಪ್ರಿಯಗೊಳಿಸಲು ವಿಜಯವಾಡ, ವಿಶಾಖಪಟ್ಟಣ, ಹೈದರಾಬಾದುಗಳಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್ ಶಾಖೆಗಳನ್ನು ತೆರೆದು ಸ್ಥಳೀಯ ಆಕಾಶವಾಣಿ ಕಲಾವಿದರ ನೆರವಿನಿಂದ ಕಾರ್ಯಕ್ರಮಗಳನ್ನು ನಡೆಸುವುದಾಗಿ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ತಿಳಿಸಿದರು. ತಿ. ತಿ ದೇ.

ಸೆಕ್ಯೂರಿಟಿ ವಿಜಿಲೆನ್ಸ್ ಆಫೀಸರ್ ಶ್ರೀ ಕೆ. ಕೃಷ್ಣ ಮೂರ್ತಿ ಅವರು ಸಭೆಯನ್ನು ಸ್ವಾಗತಿಸಿದರು. ವರದಿಯನ್ನು ಓದಿದ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲುಶೆಟ್ಟಿಯವರು ಅನ್ನಮಾಚಾರ್ಯ ಕೃತಿಗಳ ತಾಮ್ರಪತ್ರಗಳು ತಂಜಾವೂರು ಶ್ರೀರಂಗಂಗಳಲ್ಲಿ ಈಚೆಗೆ ದೊರಕಿವೆಯೆಂದೂ, ಸಾರ್ವಜನಿಕ ಸಂಸ್ಥೆ ವ್ಯಕ್ತಿಗಳ ಬಳಿಯಲ್ಲಿರುವವುಗಳನ್ನೂ ತಿ. ತಿ. ದೇ. ಗಳಿಗೆ ನೀಡುವುದರ ಮೂಲಕ ಸೂಕ್ತ ಪಾರಿತೋಷಿಕವನ್ನು ಪಡೆಯುವುದೇ ಅಲ್ಲದೆ ಅನ್ನಮಾಚಾರ್ಯ ಸಾಹಿತ್ಯ ಪ್ರಸಾರ ಕಾರ್ಯದಲ್ಲಿ ನೆರವು ನೀಡಬೇಕೆಂದೂ ನಿವೇದಿಸಿದರು.

ಮುಖ್ಯ ಅತಿಥಿಯಾಗಿ ಆಗಮಿಸಿದ ಶ್ರೀ ಪಿ. ವೆಂಕಟೇಶ್ವರರಾವ್ ಅವರು ಮಾತನಾಡಿದ ನಂತರ ಶ್ರೀ ವೇಟೂರಿ ಆನಂದಮೂರ್ತಿಯವರು ಅನ್ನಮಾಚಾರ್ಯ ಕೀರ್ತನೆಗಳ ಸಾಹಿತ್ಯಕ ಗುಣ, ಭಕ್ತಿ, ಅವು ಇತರರ ಮೇಲೆ ಬೀರಿದ ಪ್ರಭಾವಗಳನ್ನು ಕುರಿತು ಉಪನ್ಯಾಸ ಮಾಡಿದರು.

ಶ್ರೀ ಪಿ. ರಾಧಾಕೃಷ್ಣಮೂರ್ತಿ ಅವರಿಂದ ಅನ್ನಮಾಚಾರ್ಯ ಕಥೆಯ ನೆರಳು ಬೆಳಕಿನ ರೂಪಕ ನಡೆದ ಮೇಲೆ ಶ್ರೀ ನೇದುನೂರಿ ಕೃಷ್ಣ ಮೂರ್ತಿ ಅವರ ಸಂಗೀತ ಸಭೆ ನಡೆಯಿತು

ನಂತರದ ಆರು ದಿನಗಳ ಬೆಳಗ್ಗೆ ಸಾಯಂಕಾಲಗಳಲ್ಲಿ ವಿವಿಧ ರೀತಿಯ ಸಂಗೀತ ಸಭೆಗಳು ನಡೆದವು. ಇವುಗಳನ್ನು ನಡೆಸಿಕೊಟ್ಟವರಲ್ಲಿ ಹಲವು ಹಿರಿಯರೆಂದರೆ ಶ್ರೀಮತಿ ಎಂ. ಎಲ್. ವಸಂತಕುಮಾರಿ, ಶ್ರೀಮತಿ ಮಣಿಕೃಷ್ಣಸ್ವಾಮಿ, ಶ್ರೀ ನೂಕಲ ಚಿನಸತ್ಯನಾರಾಯಣ, ಶ್ರೀ ಡಿ. ಪಶುಪತಿ (ಎಲ್ಲರೂ ತಿ ತಿ. ದೇ ಆಸ್ಥಾನ ವಿದ್ವಾಂಸರು) ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರು, ಸರ್ವಶ್ರೀ ಆನಂದಭಟ್ಟರ್, ತಿರುತ್ತಣಿ ಕೃಷ್ಣಮೂರ್ತಿ ಮೊದಲಾದವರು.

ಒಟ್ಟು ಏಳುದಿನಗಳ ಕಾಲ ನಡೆದ ಈ ಉತ್ಸವಗಳು ಅನ್ನಮಾಚಾರ್ಯರ ಕೃತಿಗಳನ್ನು ಜನ ಹೆಚ್ಚು ಹೆಚ್ಚಾಗಿ ಆಲಾಪಿಸುವಂತೆ ಮಾಡುವಲ್ಲಿ ಸಫಲವಾದವು ಎನ್ನಬಹುದು.

## ಕಾಲೇಜು ಭವನದ ಶಂಕುಸ್ಥಾಪನೆ

ತಿರುಪತಿಯ ಹೊಸ ಕಲ್ಯಾಣ ಮಂಟಪದ ಬಳಿ ಶ್ರೀ ಗೋವಿಂದರಾಜಸ್ವಾಮಿ ಕಾಲೇಜಿನ ಹೊಸ ಭವನ ಸಮುದಾಯಕ್ಕೆ ಮಾರ್ಚ್ 28 ರಂದು ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಪಿ ಕೆ ಡಿ ವಿ. ಸತ್ಯನಾರಾಯಣರಾಜು ಅವರು ಶಂಕುಸ್ಥಾಪನೆ ಮಾಡಿದರು.

17 ಎಕರೆ ಸ್ಥಳದಲ್ಲಿ ಒಂದು ಕೋಟಿ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣವಾಗುವ ಈ ಕಾಲೇಜು ಭವನ ಸಮುದಾಯದಲ್ಲಿ ಉಪಾಧ್ಯಾಯರುಗಳ ವಸತಿಗೃಹಗಳೂ, ವಿದ್ಯಾರ್ಥಿ ನಿಲಯವೂ ಸೇರಿರುತ್ತವೆ.

ವಿದ್ಯಾರ್ಥಿಗಳು ತಮ್ಮ ಶಿಕ್ಷಣಕ್ಕಾಗಿ ಉನ್ನತ ಆದರ್ಶಗಳನ್ನು ಹೊಂದಿರಬೇಕೆಂದೂ ತಮ್ಮ ವಿದ್ಯಾಭ್ಯಾಸದಲ್ಲಿ ಶಿಸ್ತು ಮತ್ತು ಏಕಾಗ್ರತೆಯನ್ನು ಪಡೆಯಬೇಕೆಂದೂ ಶ್ರೀ ಪಿ ಕೆ ಡಿ. ವಿ. ಸತ್ಯನಾರಾಯಣರಾಜು ಅವರು ಹಿತವಚನ ನೀಡಿದರು.

ಶಂಕುಸ್ಥಾಪನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮಿನಾರಾಯಣ ಅವರು ತಿ.ತಿ ದೇ. ಶಿಕ್ಷಣಕ್ಕಾಗಿ ಸಾಕಷ್ಟು ವೆಚ್ಚ ಮಾಡುತ್ತಿದೆ ಎಂದು ಹೇಳುತ್ತ ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರು ಶೈಕ್ಷಣಿಕ ಹಾಗೂ ಸಾಮಾಜಿಕ ರಂಗಗಳಲ್ಲಿ ಮಾನವೀಯ ಮೌಲ್ಯಗಳನ್ನು ಬೆಳಸಿಕೊಂಡು ಇತರರಿಗೆ ಮಾದರಿಯಾಗಿ ದೇಶ ನಿರ್ಮಾಣದ ಕೆಲಸದಲ್ಲಿ ಭಾಗಿಗಳಾಗಬೇಕು ಎಂದು ಕರೆನೀಡಿದರು.

ತಿ. ತಿ ದೇ. ವಿದ್ಯಾಧಿಕಾರಿ ಶ್ರೀ ಚಂದ್ರಶೇಖರನಾಯುಡು ಅವರು ಸಭೆಯನ್ನು ಸ್ವಾಗತಿಸಿದರು. ಕಾಲೇಜಿನ ವಿದ್ಯಾರ್ಥಿ ಸಂಘದ ಅಧ್ಯಕ್ಷ ಶ್ರೀ ಕೆ. ಕೋಟೇಶ್ವರರಾವ್ ಹಾಗೂ ತೆಲುಗು ಪ್ರಾಧ್ಯಾಪಕ ಶ್ರೀ ಕೆ. ಜಯಚಂದ್ರರೆಡ್ಡಿಯವರುಗಳೂ ಮಾತನಾಡಿದರು.

## ಪೋಲಿಯೋ ಶಸ್ತ್ರ ಚಿಕಿತ್ಸಾ ಶಿಬಿರ

ತಿರುಪತಿಯ ತಿ ತಿ. ದೇ ಕೇಂದ್ರ ಆಸ್ಪತ್ರೆಯಲ್ಲಿ ಮಾರ್ಚ್ 17 ರಿಂದ ಪೋಲಿಯೋ ಶಸ್ತ್ರ ಚಿಕಿತ್ಸಾ ಶಿಬಿರವನ್ನು ನಡೆಸಲಾಯಿತು. ಒಟ್ಟು 300 ಕ್ಕೂ ಮಿಕ್ಕಿದ ಪೋಲಿಯೋ ಪೀಡಿತರನ್ನು ಪರೀಕ್ಷಿಸಿ 74 ಮಂದಿಗೆ ಶಸ್ತ್ರ ಚಿಕಿತ್ಸೆ ನಡೆಸಲಾಯಿತು. 90 ಮಂದಿಗೆ ಉಚಿತವಾಗಿ ಕೃತಕ ಅಂಗಾಂಗಗಳನ್ನು ನೀಡಲಾಯಿತು. ಶಿಬಿರಕ್ಕೆ ಆಗಮಿಸಿದವರಿಗೆ ಉಚಿತ ಊಟ ವಸತಿಗಳನ್ನು ಏರ್ಪಡಿಸಲಾಗಿದ್ದಿತು.

## ಅನ್ನದಾನ ಯೋಜನೆ ವಿವರಗಳು

"ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯವನ್ನು ಶೀಘ್ರದಲ್ಲೇ ತಿ. ತಿ ದೇ. ಆರಂಭಿಸಲಿದೆ. ಈ ಯೋಜನೆಯ ವಿವರಗಳು ಈ ರೀತಿ ಇವೆ ಯಾವ ಭಕ್ತರೇ ಆಗಲಿ ಹತ್ತು ಲಕ್ಷ ರೂ ಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನ್ನದಾನವನ್ನು ತಿ ತಿ ದೇ ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವೂ ಆದಾಯಕರ ಶಾಸನದ ಯು/ಎಸ್ 80 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು ಹಾಗೂ ಉಚಿತ ಭೋಜನದಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲಿ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.

